# ಪ್ರೇಮಪೂರ್ಣ ಮಂದಿರ

ಲೇಖಕರು :
**ಯು. ನಾರಾಯಣಭಟ್ಟ**

ಪ್ರಕಾಶಕರು :
**ಯು. ನಾರಾಯಣಭಟ್ಟ**
ಕಾನಗೋಡು, **ಸಾಗರ.**

# ಮುನ್ನುಡಿ

ಶ್ರೀಮಾನ್ ಯು. ನಾರಾಯಣಭಟ್ಟರು ಮುನ್ನುಡಿಯನ್ನು ಬರೆಯಬೇಕೆಂದು ನನ್ನನ್ನು ಕೇಳಿದುದು ನನಗೆ ಅಪಹಾಸ್ಯಮಾಡಬೇಕೆಂದಿರುವರೇನೋ ಎಂಬ ಭ್ರಮೆಯನ್ನುಂಟುಮಾಡುತ್ತದೆ. ಲೇಖಕರಿಗಿಂತ ಮುನ್ನುಡಿಯ ಬರೆಹಗಾರರು ಹೆಚ್ಚು ಅನುಭವಿಗಳೂ ಪ್ರಸಿದ್ಧರೂ ಆಗಿದ್ದರೆ ಮಾತ್ರ ಆ ಮುನ್ನುಡಿಗೆ ಬೆಲೆಯುಂಟು. ನಾನು ಅನುಭವಿಯೂ ಅಲ್ಲ; ಬರೆವಣಿಗೆಯಲ್ಲಿ ನಾಲ್ಕಾರು ಜನರ ಮೆಚ್ಚಿಗೆಯನ್ನು ಪಡೆದವಳೂ ಅಲ್ಲ. ಆದರೂ ಶ್ರೀ|| ಭಟ್ಟರ ಆದರದ ಕೇಳಿಕೆಗೆ ಇಲ್ಲವೆನ್ನಲಾರದೆ ಬರೆಯುತ್ತಿದ್ದೇನೆ.

"ಪ್ರೇಮಪೂರ್ಣ ಮಂದಿರ"ವು ಸಣ್ಣ ಕತೆಗಿಂತ ಸ್ವಲ್ಪ ದೊಡ್ಡದಾದ, ಕಾದಂಬರಿಗಿಂತ ಚಿಕ್ಕದಾದ ಒಂದು ಸಮಾಜ ಚಿತ್ರ. ಇದು ಲೇಖಕರ ಮೊದಲನೆಯ ಕೃತಿಯಲ್ಲ. ಈ ಕತೆಯ ತಪ್ಪು-ಒಪ್ಪುಗಳನ್ನು ಲೇಖಕರೇ ಹೇಳಿರುವಂತೆ ವಾಚಕರು "ವಿಮರ್ಶೆಯ ತಕ್ಕಡಿಯಲ್ಲಿ ತೂಗಿ" ಹೇಳಬೇಕು.

ಲೇಖಕರಿಗೆ ಕನ್ನಡ ಸೇವೆಯಲ್ಲಿರುವ ಉತ್ಸಾಹವು ಮೆಚ್ಚತಕ್ಕುದು. ಅನುಭವವು ಹೆಚ್ಚುತ್ತಾ ಬಂದಂತೆ ಅವರು ಸಾಹಿತ್ಯಕ್ಕೆ ಉತ್ತಮ ಸೇವೆಯನ್ನು ನೀಡಬಲ್ಲರು. ಭಗವಂತನು ಅವರ ಪ್ರಯತ್ನವನ್ನು ಆಶೀರ್ವದಿಸಿ, ಯಶಸ್ವಿಯಾಗಿ ಮಾಡಲೆಂದು ಹಾರೈಸುತ್ತೇನೆ.

ಭದ್ರಾವತಿ
೩೧-೧೦-೧೯೪೮

ಎಚ್. ವಿ. ಸಾವಿತ್ರಮ್ಮ.

# ನನ್ನ ನುಡಿ

ನಾನೂ ಶ್ರೀಮಾನ್ ಎಂ. ಗೋಪಾಲಕೃಷ್ಣ ಅಡಿಗರೂ ಸಹಪಾಠಿಗಳಾಗಿದ್ದೆವು. ಅಡಿಗರು ನನ್ನನ್ನು ಹದಿನೈದು ವರ್ಷಗಳಿಂದ ಬಲ್ಲರು. ನಾನೂ ಆಗಾಗ ಕತೆಯನ್ನೋ ಕವನವನ್ನೋ ಬರೆಯುತ್ತಿರುವೆನೆಂದೂ ಅವರಿಗೆ ಗೊತ್ತು. ಆ ಬಗ್ಗೆ ತರುಣಸಾಹಿತಿಗಳಾದ ಅವರು ನನ್ನ ವಿಷಯದಲ್ಲಿ ತಳೆದ ಸದಭಿಪ್ರಾಯವೇ ನನ್ನನ್ನು ದಿನೇ ದಿನೇ ಉತ್ತೇಜಿತನನ್ನಾಗಿ ಮಾಡುತ್ತಿದೆ.

ನನ್ನ ಈ 'ಪ್ರೇಮಪೂರ್ಣ ಮಂದಿರ'—ಒಂದು ಚಿಕ್ಕ ಸಾಮಾಜಿಕ ಕತೆ. ಇದನ್ನು ಬರೆದು ಹೆಚ್ಚಳಪಡೆಯಬೇಕಾದುದಿಲ್ಲವಾದರೂ, ಬರೆದ ಕತೆಗಳನ್ನು ಪ್ರಕಟಿಸದೆ, ಮೂಲೆಪಾಲು ಮಾಡುವುದು ಸರಿಯಲ್ಲವೆಂದು, ಈ ಚಿಕ್ಕ ಕುಸುಮವನ್ನು ವಾಚಕರ ಮುಂದೆ ಇಡುವ ಸಾಹಸಮಾಡುತ್ತಲಿದ್ದೇನೆ. ಸಾಹಿತ್ಯದ ಸಂತೆಯಲ್ಲಿ ನನ್ನದೊಂದು ಹಣ್ಣಿನ ಬುಟ್ಟಿ, ಅಷ್ಟೇ! ಶ್ರೀ|| ಬಿ. ಎಚ್. ಶ್ರೀಧರರು ತಮ್ಮ 'ಮೇಘನಾದ'ದಲ್ಲಿ 'ತನಗೆ'—ಸ್ನೇಹವು 'ಮಧುರಾದಪಿ ಮಧುರತರಂ' ಎಂದು ಬರೆದಿರುತ್ತಾರೆ. ಶ್ರೀ|| ಎಂ. ಗೋಪಾಲಕೃಷ್ಣ ಅಡಿಗರ, ಶ್ರೀ|| ಬಿ. ಎಚ್ ಶ್ರೀಧರ—ಇವರಂತಹ ಕೈಬಿಡದ ಗೆಳೆಯರಿಂದ, ನನಗೂ ಹಾಗಿರುವುದೆಂದು ಕಂಡುಕೊಂಡಿದ್ದೇನೆ. ಇದು ನನ್ನ ಪುಣ್ಯಫಲವೇ ಆಗಿರಬಹುದೇ?

ನನ್ನ ಮೊದಲಿನ ಕತೆ—'ಭಾರತ ಲಕ್ಷ್ಮಿ' ಮತ್ತು ಇನ್ನೊಂದು 'ಸ್ವಾರ್ಥದ ಹಾದಿಯಲ್ಲಿ'—ಶ್ರೀ|| ಟಿ. ಮಹಾಬಲೇಶ್ವರಭಟ್ಟ—ಜಲಂಧರ ಪ್ರಕಟನ ಮಂದಿರ, ಸಾಗರ—ಇವರು 'ತೋರಣ'ವೆಂಬ ಸಂಕಲನದಲ್ಲಿ ಪ್ರಕಟಿಸಿದ್ದಾರೆ. ಆದುದರಿಂದ ಅವರ ಈ ಔದಾರ್ಯಕ್ಕೆ ನಾನು ಚಿರಋಣಿ.

ಕೊನೆಯದಾಗಿ, ನನ್ನ ಅರಿಕೆಯನ್ನು ಮನ್ನಿಸಿ, ಚೊಕ್ಕ ಚಿಕ್ಕ ಮುನ್ನುಡಿಯನ್ನು ಬರೆದು ಹರಸಿದ ಸಹೋದರಿ ಸಾವಿತ್ರಮ್ಮ, ಎಚ್. ವಿ. ಬಿ.ಎ.—ಇವರನ್ನು ನಾನೆಂದಿಗೂ ಮರೆಯಲಾರೆ.

"ಪ್ರೇಮನಿವಾಸ",
ಕಾನಗೋಡು, (ಕೆಳದಿ)
ಸಾಗರ
೧—೪—೧೯೪೯

**ಯು. ನಾರಾಯಣಭಟ್ಟ**

# ಪ್ರೇಮಪೂರ್ಣ ಮಂದಿರ

ಊರಿನ ಹೆಸರು ಬಿಂದುಪುರ. ಅಲ್ಲಿ, ಎಲ್ಲಿನೋಡಿದರೂ ತೆಂಗಿನ ತೋಟಗಳು. ಪ್ರತಿಯೊಂದು ಮನೆಯ ಸುತ್ತಲೂ ತೆಂಗಿನಮರಗಳೇ ಹೆಚ್ಚಾಗಿದ್ದವು. ಇಂತಹಮರಗಳ ಸಾಲಿನಮೂಂದು ಬೀದಿ—ಅಲ್ಲೊಂದು ಹುಲ್ಲಿನ ಜೋಪಡಿ. ಆ ಜೋಪಡಿಯೇ ಮನೆಯ ಯಜಮಾನನ ಸಿರಿಯ ಸಂಕೇತವೆಂದು ಯಾರೂ ಭಾವಿಸುವಂತಿತ್ತು. ಗಂಡ ಕೃಷ್ಣಮೂರ್ತಿ, ಹೆಂಡತಿ ಅನಸೂಯಾ; ಅಚ್ಚುಕಟ್ಟು ಸಂಸಾರ. ಮನೆಯ ನಂದಾದೀಪ ಬೆಳಗಲು ಅವತರಿಸಿರುವ ಒಂದು ಗಂಡು—ಏಕನಾಥ, ಇನ್ನೊಂದು ಹೆಣ್ಣು ವತ್ಸಲಾ—ಇವರಿಬ್ಬರು ಮಕ್ಕಳು

ಕೃಷ್ಣಮೂರ್ತಿರಾಯರು ಒಂದುಕಾಲದಲ್ಲಿ ಆಗರ್ಭ ಶ್ರೀಮಂತರಿದ್ದಿದ್ದರು. ಆದರೆ ಪೂರ್ವಜರುಮಾಡಿದ ಸಾಲವನ್ನು ತೀರಿಸಲಿಕ್ಕೂ ಸಂಸಾರ ನಿರ್ವಹಣಕ್ಕೂ ಪುನಃ ಸಾಲಮಾಡಿದ ಅವರು ಸಾಲದ ಮೊತ್ತ ಹೆಚ್ಚಾದಾಗ, ಆಸ್ತಿ, ಮನೆಮಠಗಳೆಲ್ಲವನ್ನೂ ಕಳೆದುಕೊಂಡರು. ತುಂಬಿದಮನೆ. ಸುಖದಿಂದ ಉಂಡುಟ್ಟ ಹೆಂಡತಿ ಮಕ್ಕಳು, ಆಳುಕಾಳು ಇದ್ದಕಾಲ........ಆದರೆ ಈಗ? ಎಲ್ಲವೂ ಬೋಳಾಗಿ, ತಮ್ಮ ಜನ್ಮಸ್ಥಳವಾದ ತರುಪುರವನ್ನು ಬಿಟ್ಟು, ಈಗಿದ್ದ ಬಿಂದುಪುರಕ್ಕೆ ಕೃಷ್ಣಮೂರ್ತಿರಾಯರು ಬಂದಾಗ, ಏಕನಾಥನಿನ್ನೂ ಚಿಕ್ಕ ಹಸುಳೆಯಾಗಿದ್ದನು, ವತ್ಸಲೆ ಎಂಟುವರ್ಷದ ಹುಡುಗಿಯಾಗಿದ್ದಳು. ಆಗ! ಈಗ ಕೃಷ್ಣಮೂರ್ತಿರಾಯರು ಕೇವಲ ನಿರಾಶೆಯ ಮೂರ್ತಿಯಾಗಿದ್ದರು. ಈಗಿನ ಪರಿಸ್ಥಿತಿಯಲ್ಲಿ ಅವರಿಗೆ ಜೀವನದಲ್ಲಿ ತುಂಬಾ ಜುಗುಪ್ಸೆ. 'ಈ ಜಗತ್ತೇ ಶಾಶ್ವತವಲ್ಲ...........ಹೆಂಡತಿ ಮಕ್ಕಳು, ಸಿರಿ ಸಂಪತ್ತುಗಳೆಲ್ಲಾ ಒಂದು ಭ್ರಮೆಯೆಂಬ ಸಿದ್ಧಾಂತಕ್ಕೆ ಬಂದುಬಿಟ್ಟಿದ್ದರು. ನಂದಗೋಕುಲದಂತೆ ಮನೆತುಂಬ ಜನರಿದ್ದು ನಲಿದ ಶ್ರೀಮಂತಿಕೆಯ ಬಾಳು—ಈಗ ಒಂದು ತುತ್ತು ಅನ್ನಕ್ಕೆ ಪರರ ಆಶ್ರಯ

ವನ್ನುಮಾಡುವ ಗೋಳು—ಈ ರೀತಿಯಲ್ಲಿ ತನ್ನ ಜೀವನದ ಬೀಳು—ಇದರಿಂದ ಕೃಷ್ಣಮೂರ್ತಿರಾಯರಿಗೆ ಜೀವನವು ಅಸಹ್ಯವೆನಿಸಿತು. ಹಾಗೆಂದು ಅವರು ಏನುಮಾಡುತ್ತಾರೆ? ಹುಟ್ಟುವುದು-ಬೆಳೆಯುವುದು; ಬದುಕುವುದು-ಸಾಯುವುದು—ಇವೆಲ್ಲ ಜಗತ್ತಿನಲ್ಲಿ ಅವ್ಯಾಹತವಾಗಿ ನಡೆಯುತ್ತಿರುತ್ತವೆ. ಅದು ದೈವಲೀಲೆ! ಒಬ್ಬನ ಬಾಳಿನ ಪಾತ್ರೆ ತುಂಬಿತುಳುಕಾಡುತ್ತದೆ. ಇನ್ನೊಬ್ಬನ ಬಾಳಿನ ಪಾತ್ರೆ ಬರಿದಾಗುತ್ತದೆ! ಈ ಪ್ರವಾಹದಿಂದ ತಪ್ಪಿಸಿಕೊಳ್ಳಲು ಮಾನವರಿಗೆ ಸಾಧ್ಯವೇ?

ಹೆಂಡತಿ ಅನಸೂಯಾದೇವಿಯೆಂದರೆ ಅತ್ರಿಮುನಿಯ ಸತಿ ಅನಸೂಯೆಯಂತಿದ್ದಳು. ಗಂಡನ ಹೆಸರಿನಲ್ಲಿ ಮಾತ್ರ ವ್ಯತ್ಯಾಸ, ಅಷ್ಟೆ! ಎಷ್ಟೋ ಸಲ ಅನಸೂಯೆ ತನಗೆ ಯೋಗ್ಯಳಾದ ಹೆಂಡತಿಯಲ್ಲವೆಂದೂ, ಇನ್ನೂ ಹೆಚ್ಚಿನ ಪುಣ್ಯಾತ್ಮರಿಗೆ ಲಭಿಸಬೇಕೆಂದ್ದಿತ್ತೆಂದೂ ಹೆಂಡತಿಯನ್ನು ಮನಸಾರೆ ಹೊಗಳುವರು. ಒಳ್ಳೆಯ ಹೆಂಡತಿಯನ್ನು ಪಡೆದ ಕೃಷ್ಣಮೂರ್ತಿರಾಯರೆಷ್ಟು ಭಾಗ್ಯಶಾಲಿಯೋ! ಆದರೆ ತನ್ನ ದುರದೃಷ್ಟವನ್ನು ತಾನೇ ಹಳಿದುಕೊಳ್ಳುತ್ತಿದ್ದರು. ಅನಸೂಯೆ ನಡೆನುಡಿಯಲ್ಲಿ, ಅಂದಚೆಂದದಲ್ಲಿ, ನೀತಿನಿಯಮದಲ್ಲಿ ಇತರ ಹೆಂಗಸರಿಗೆ ಮೇಲ್ಪಂಕ್ತಿಯಾಗಿದ್ದಳು. ತನ್ನ ಗಂಡ ಇಡೀ ದಿನ ಹೊಟ್ಟೆಯಪಾಡಿಗಾಗಿ ಅಲೆದೂ ಅಲೆದೂ ನಿರಾಸನಾಗಿ, ಕಟ್ಟಕಡೆಗೆ ಒಂದು ಹಿಡಿ ರಾಗಿಯನ್ನು ತಂದರೂ, ಅದೇ ಪರಮಾನ್ನವೆಂದು ಭಾವಿಸಿ ಪತಿಸೇವಾನಿರತಳಾಗಿ, ಕಾಲಕ್ಷೇಪಮಾಡುತ್ತಿದ್ದಳು. ತಾಯಿ ತಂದೆಯರು ಜೀವನಕ್ಕೆಷ್ಟು ಚಡಪಡಿಸುತ್ತಾರೆಂದು ವತ್ಸಲೆಗೆ ಮಾತ್ರ ಚೆನ್ನಾಗಿ ತಿಳಿಯುತ್ತಿತ್ತು. ತನಗೆ ಈಗ ಹದಿನಾರು ವರ್ಷ ತುಂಬಿದರೂ ತಾಯಿ ತಂದೆಗೆ ಭಾರವಾಗಿದ್ದೆನಲ್ಲಾ ಅಯ್ಯೋ! ಹೆಣ್ಣಾಗಿ ನಾನೇಕೆ ಹುಟ್ಟಬೇಕಾಗಿತ್ತು ಎಂದು ಆಗಾಗ ಕೊರಗುತ್ತಿದ್ದಳು.

ಏಕನಾತನು ಶಾಲೆಗೆ ಹೋಗುತ್ತಿದ್ದನು. ಹುಡುಗನೇನೋ ಬಹಳ ಚುರುಕಾಗಿದ್ದನು. ಇವನು ಮಿಡ್ಲ್ ಸ್ಕೂಲಿಗೆ ಹೋಗಲಾರಂಭಿಸಿದೊಡನೆಯೇ ತಂದೆಗೆ ಇವನ ಕಾಟ ಹೆಚ್ಚಾಯಿತು. ಯಾವಾಗಲೂ ಎಕ್ಸರ್ಸೈಜ್ ಬುಕ್, ರೀಡರ್, ಜಾಮೆಟ್ರಿ ಬಾಕ್ಸ್—ಹೀಗೆ ಒಂದಲ್ಲ ಎರಡಲ್ಲ, ಅನೇಕ ವಿಧಗಳಿಂದ ತಂದೆಯನ್ನು ಕಾಡುತ್ತಿದ್ದನು. ಅವನ ಇಚ್ಛೆಯು ನೆರವೇರ

ದಿದ್ದರೆ, ನೇರವಾಗಿ, ತಾಯಿಯ ಬಳಿಗೆ ದೂರನ್ನು ತರುವನು. ತಾಯಿಯೂ ಅವನ ಇಚ್ಛೆಯನ್ನು ನೆರವೇರಿಸದಿದ್ದರೆ, ಕೂಡಲೇ ಸತ್ಯಾಗ್ರಹವನ್ನಾರಂಭಿಸುವನು. ಮಧ್ಯಾಹ್ನವೋ ರಾತ್ರಿಯೋ ಆದಾಗ, ಮನೆಗೆ ಊಟಕ್ಕೇ ಬರಲೊಲ್ಲನು. ಹೀಗೆ ಎಷ್ಟೋ ಸಲ ಮಾಡಿದಾಗ, ತಾಯಿಯ ಕರುಳು 'ಚುರ್' ಎನ್ನುತ್ತಿತ್ತು. ಅಂತೂ ಇಂತೂ ಕೊನೆಗೆ ಏಕನಾಥನೇ ತನ್ನ ಹಟದಲ್ಲಿ ಗೆಲ್ಲುತ್ತಿದ್ದನು.

ಮಧುಸೂದನರಾಯರು ಕೃಷ್ಣಮೂರ್ತಿರಾಯರ ದೂರದ ನೆಂಟರಂತೆ. ಮಧುಸೂದನರಾಯರು ತುಂಬಾ ಅನುಕೂಲಸ್ಥರು. ಅವರ ಹೆಂಡತಿಯಾದ ರಮಾಬಾಯಿ ಈ ಮೊದಲೇ ತೀರಿಕೊಂಡಿದ್ದಳು. ಗಂಡು ಮಗ 'ಯಶವಂತ'. ಕೃಷ್ಣಮೂರ್ತಿರಾಯರಿಗೆ ಮದುವೆಗೆ ನೆರೆದ ಮಗಳಿರುವಳೆಂದು ಅವರಿಬ್ಬರು ಮಗ ತಂದೆಗೆ ಗೊತ್ತು. ಯಶವಂತನಿಗೆ ವತ್ಸಲೆಯನ್ನು ತಂದುಕೊಂಡು ಮದುವೆಮಾಡಬೇಕೆಂದು ಯೋಚಿಸಿದ ಮಧುಸೂದನರಾಯರು ಒಂದು ದಿನ ಕೃಷ್ಣಮೂರ್ತಿರಾಯರಲ್ಲಿಗೆ ಬಂದರು. ಅವರು ಮದುವೆಯ ಪ್ರಸ್ತಾಪವನ್ನೆತ್ತಲು ಬಂದುದು ಅನಸೂಯಾದೇವಿಗಂತೂ ಅತ್ಯಂತ ಆನಂದವನ್ನುಂಟುಮಾಡಿತು. ಅವಳ ಸಂತೋಷ ಒಂದು ಸಾಗರದಷ್ಟು ವಿಶಾಲವಾಗಿತ್ತು. ಏಕನಾಥನು ಒಳಗೆ ಓಡೋಡಿ ಅಕ್ಕನನ್ನು ಗೇಲಿಮಾಡಿ, ಅವಳಿಂದ ಒಂದೋ ಎರಡೋ ಕಪಾಲಮೋಕ್ಷ ಪಡೆದು ಹೊರಕ್ಕೆ ಬರುತ್ತಿದ್ದನು. 'ನಿನಗೆ ಇವೆ ನನ್ನ ಕೈ........ಮದುವೆ ದಿನ ನಿನ್ನ ಸೀರೆ ಸೆರಗಿಗೂ ಭಾವನ ಪಂಚೆಗೂ ಬಲವಾದ ಗಂಟು ಬಿಗಿದು ಪೇಚಾಟಮಾಡದಿದ್ದರೆ ನಾನು ಏಕನಾಥನೇ ಅಲ್ಲ'ವೆಂದು ಪಣತೊಟ್ಟನು. ಇತ್ತ ಜೋಯಿಸರನ್ನು ಕರೆಯಿಸಿ, ಜಾತಕಗಳನ್ನು ನೋಡಿಸಿ, ವರಸಾಮ್ಯ ಸರಿಯಾಗಿ ಕೂಡಿಬಂದುದರಿಂದ, ಅದೇ ಫಾಲ್ಗುಣ ಶುದ್ಧ ಬಿದಿಗೆಯ ಮಿಥುನ ಲಗ್ನದಲ್ಲಿ ವಿವಾಹವನ್ನು ಜರುಗಿಸುವುದೆಂದು ನಿಶ್ಚಯವೂ ಆಯಿತು. ಏಕನಾಥನಿಗಂತೂ ಮದುವೆಯ ದಿನ ಸಮೀಪಿಸಿದಂತೆಲ್ಲ, ಸಾಮಾನುಗಳ ಸಂಗ್ರಹ—ಉಗ್ರಾಣದ ನೆನಪು ಬಂದು, ಏಕಚಕ್ರದ ನಗರದ ಭೀಮ—ಬ್ರಾಹ್ಮಣನ ಮನೆಯ ಭಕ್ಷ್ಯ ಭೋಜ್ಯದ ನೆನಪಿನಿಂದ ಉತ್ತೇಜಿತನಾದಂತೆ ತಿನ್ನುವುದೊಂದೇ ಹಂಬಲ!

ಮದುವೆಯ ದಿನವೂ ಸಮೀಪಿಸಿತು. ಊರಿನವರೆಲ್ಲರೂ ಮೈಯೆಲ್ಲಾ ಕಣ್ಣು ಮಾಡಿಕೊಂಡು ನೋಡಿದರು ಮದುವೆಯನ್ನು! ಮದುವೆಯೂ ಯಾವುದೂ ತೊಂದರೆ ತಾಪತ್ರಯವಿಲ್ಲದೆ ವಿಜ್ರಂಭಣೆಯಿಂದ ನೆರವೇರಿತು. ನಾಲ್ಕು ದಿನಗಳವರೆಗೆ ಗಲಾಟೆಯೋ ಗಲಾಟೆ. ಯಾರ ಬಾಯಿಂದ ಕೇಳಿದರೂ ಯಶವಂತ-ವತ್ಸಲೆಯರ ಮದುವೆಯ ಪ್ರಸ್ತಾಪವೇ ಪ್ರಸ್ತಾಪ! ಕೆಲವರು ಹೆಣ್ಣಿಗೆ ತಕ್ಕ ಗಂಡಲ್ಲವೆಂದು ಮೂಗು ಮುರಿದರು. ಕೆಲವರು ಆ ಮಂಗ ಅಂತಹ ರತ್ನವನ್ನು ಕಟ್ಟಿಕೊಂಡು ನಾಲ್ಕು ದಿನವೂ ಬಾಳ್ವೆ ಮಾಡಲಾರನೆಂದು ಉದ್ಗಾರ ತೆಗೆದರು. ಹೆಂಡತಿಯನ್ನು ಯಾರಿಗಾದರೂ ಮಾರಿಕೊಂಡು ಹೋಗುವುದೇ ಸರಿಯೆಂದು ಇನ್ನು ಕೆಲವರು ಹಳೆಯ ಮುತ್ತೈದೆಯರು ಹೇಳಿಕೊಂಡರು. ಯಾರು ಏನು ಹೇಳಿ ಏನು ಬಂತು? ವಿಧಿವಿಲಾಸವನ್ನು ಮೀರುವುದು ಯಾರಿಗೂ ಸಾಧ್ಯವಿಲ್ಲವಷ್ಟೆ! ಮದುವೆಯಾದ ಕೆಲದಿನಗಳ ನಂತರ ವತ್ಸಲೆಯು ಗಂಡನ ಮನೆಯನ್ನು ಸೇರಿ ಪತಿಸೇವಾನಿರತಳಾದಳು............ಆ ವೇಳೆಗೆ ಪ್ರಸ್ತವೂ ಮುಗಿದಿತ್ತು.

ಯಶವಂತನು ಅಷ್ಟೇನೂ ಚುರುಕಲ್ಲದ ಸಾದಾ ಮನುಷ್ಯನಾಗಿದ್ದನು. ವಿದ್ಯೆಯ ಸಂಸ್ಕಾರವಿಲ್ಲದಿದ್ದುದರಿಂದ ಯಾವಾಗಲೂ ಒರಟೊರಟು ಮಾತುಗಳನ್ನಾಡುತ್ತಿದ್ದನು. ಪಿತೃವಾಕ್ಯಪರಿಪಾಲನೆಯಲ್ಲಂತೂ ಶ್ರೀ ರಾಮನಿಗಿಂತ ಮಿಗಿಲಾಗಿದ್ದನು. ಆದರೆ ಶ್ರೀ ರಾಮನ ದಾರಿಯೇ ಬೇರೆ. ಈತನು ತಂದೆಯ ಮಾತನ್ನು ಕೇಳಿ ಯಾವ ಅವಿವೇಕದ ಕೆಲಸವನ್ನು ಮಾಡಲೂ ಹಿಂಜರಿಯುವುದಿಲ್ಲವಾಗಿತ್ತು. ಹೆಂಡತಿ ಮನೆಗೆ ಬಂದುದಾದರೂ ತಮಗಿಬ್ಬರಿಗೆ ವೇಳೆಗೆ ಸರಿಯಾಗಿ ಅಡಿಗೆಮಾಡಿ ಹಾಕಲಿಕ್ಕೆಂದೂ........ಬಹುಶಃ ಇದಕ್ಕಿಂತ ಹೆಚ್ಚು ಹೊಣೆ ಅವಳಿಗಿರಲಿಕ್ಕಿಲ್ಲವೆಂದೂ ಆತನು ಭಾವಿಸಿದ್ದನು. ಅಜ್ಞಾನಿಯಾದ ಮಗನಿಗೆ ತಂದೆಯ ಮಾತೆಂದರೆ ವೇದವಾಕ್ಯ. ಕ್ರಮೇಣ ಹೆಂಡತಿಯಾದ ವತ್ಸಲೆಯನ್ನು ಪ್ರೀತಿಸುವುದರ ಬದಲು ತಾನು ಕೈ ಹಿಡಿದ ಗಂಡನೆಂದು ತನ್ನ ದರ್ಪವನ್ನು ತೋರಿಸತೊಡಗಿದನು. ಅವಳಾದರೋ ಇತರ ಹೆಣ್ಣು ಮಕ್ಕಳು 'ಬಾಳೆಯ ಮರ' ಬೆಳೆಯುವಂತೆ ಬೆಳೆದ ಅಪವಾದಕ್ಕೆ ಹೊರತಾಗಿದ್ದಳು. ಮದುವೆಯಾಗುವ ವರ್ಷದವರೆಗೂ ಒಂದು

ಪುಸ್ತಕವನ್ನು ಬಿಟ್ಟವಳಲ್ಲ. ತಾನೇ ಸ್ವತಃ ತನ್ನ ಜ್ಞಾನವನ್ನು ಓದಿ ಹೆಚ್ಚಿಸಿ ಕೊಂಡಿದ್ದಳು. ಓದಿಲ್ಲದೆ ಬೆಳೆದ ಯಾವುದಾದರೂ ಹುಡುಗಿಗೆ, 'ನೀನು ಯಾಕೆ ಓದಿಲ್ಲ'? ಎಂದು ಪ್ರಾಜ್ಞರು ಪ್ರಶ್ನೆ ಹಾಕಿದರೆ, 'ನಮ್ಮ ತಾಯಿ ತಂದೆ ನಮ್ಮನ್ನು ಶಾಲೆ ಮನೆಗೆ ಕಳಿಸಿಯೆ ಇಲ್ಲವಲ್ಲ! ನಾವು ಹೇಗೆ ಓದಲಿ? ಎಂದು ಬಹಳ ಸುಲಭದಲ್ಲಿ ತಮ್ಮ ಹೊಣೆಯನ್ನು ಹಾರಿಸಿಬಿಡುತ್ತಾರೆ. ಅಂತಹ ಹೆಣ್ಣುಮಕ್ಕಳು ನಮ್ಮ ವತ್ಸಲೆಯಿಂದ ಹೊಸ ಪಾಠಕಲಿಯ ಬಹುದಲ್ಲವೇ? ವತ್ಸಲೆಯು ಈ ಮೊದಲೇ ಅಲ್ಪಸ್ವಲ್ಪ ಓದಿರುವುದರಿಂದ ಆ ಓದಿನ ಗೀಳು ಗಂಡನ ಮನೆಯಲ್ಲೂ ಚಿಗುರಿತು. ಆದುದರಿಂದ ಮನೆ ಕೆಲಸವೆಲ್ಲಾ ಮುಗಿದ ಬಳಿಕ, ಯಾವುದಾದರೂ ಗ್ರಂಥಮಾಲೆಯ ಕಾದಂ ಬರಿಗಳನ್ನು ಓದುತ್ತಿದ್ದಳು. ಒಂದು ದಿನ ಅ. ನ. ಕೃಷ್ಣರಾಯರ 'ಕಣ್ಣೀರು,' ಗೋ. ರಾ. ಅ· ರವರ 'ಹೇಮಾವತಿ' ಎಂಬ ಪುಸ್ತಕಗಳನ್ನು ಓದಿಯಂತೂ 'ಹೆಣ್ಣಿನ ಜನ್ಮವೇ ವ್ಯರ್ಥ'ವೆಂದು ಕಣ್ಣೀರಿನ ಪ್ರವಾಹವನ್ನೇ ಹರಿಯಿಸಿ ಬಿಟ್ಟಿದ್ದಳು. ಪಾಪ! ಆ ಗೌರಿಯ ಪಾಡು ತನಗಾಗಿದ್ದರೆ........ಅದೃಷ್ಟ ವಶಾತ್ ಘಣಿಯಮ್ಮನಂತಹ ಅತ್ತೆ ತನಗಿಲ್ಲ. ಆದರೆ ಮಾವನೇ ಘಣಿಯಮ್ಮ ನಾಗಿ ಏಕೆ ಅವತರಿಸಿರಬಾರದು ಆ 'ಹೇಮಾವತಿ'ಯೂ ಹಾಗೇನೆ! 'ನಸ್ತ್ರೀ ಸ್ವಾತಂತ್ರ್ಯಂ ಅರ್ಹತಿ' ಎಂದೊಂದು ಅಧ್ಯಾಯವೇ ಆ ಕಾದಂಬರಿಯಲ್ಲಿ 'ಹೇಮಾವತಿ'ಗೆ ಮೀಸಲು........ಹೀಗೆಯೇ ಅವಳು ಪ್ರತಿಯೊಂದು ಕಾದಂ ಬರಿಯನ್ನು ಓದಿದಾಗಲೂ ಕಾದಂಬರಿಯಲ್ಲಿ ಪ್ರಕಟವಾಗುವ ಪ್ರತಿಯೊಂದು ಸ್ತ್ರೀ ವ್ಯಕ್ತಿಯಲ್ಲೂ ತನ್ನ ವ್ಯಕ್ತಿತ್ವವನ್ನು ಕರಗಿಸಿಬಿಡುತ್ತಿದ್ದಳು. ಕೆಲವು ಸಲ ತನ್ನ ಮಾವ ಮಧುಸೂದನರಾಯರು ಹೆಂಗಸರ ವಿಷಯದಲ್ಲಿ ಪ್ರಾಮಾಣಿಕರಲ್ಲದೆ ಇರುವುದೂ, ಇತ್ತೀಚಿಗೆ ಅವರ ವರ್ತನೆಯಲ್ಲಿ ವ್ಯತ್ಯಾಸ ಕಂಡುದೂ ವತ್ಸಲೆಯ ಯೋಚನೆಗೊಂದು ಬಲವಾದ ಕಾರಣವಾಗಿತ್ತು. ಅವರು ಪ್ರಾಯದ ಹೆಂಗಳೆಯರಲ್ಲಿ ಪ್ರಾಮಾಣಿಕರಲ್ಲದೆ ಇರುವುದು ವಾಸ್ತ ವಿಕ ಸಹಜವಾಗಿತ್ತು! ಸೊಸೆಯಲ್ಲಿ ಅವರಿಟ್ಟಿರುವ ಪ್ರೀತ್ಯಾದರಗಳೂ ಅಷ್ಟೇನೂ ಹೇಳಿಕೊಳ್ಳುವಂತಿರಲಿಲ್ಲ; ಎಷ್ಟೋ ಅಷ್ಟೆ! ಸಾಧ್ಯವಾದರೆ ಇದ್ದದ್ದೊಂದು ಇಲ್ಲದೊಂದು ಚಾಡಿ ಹೇಳಿ ಮಗನಿಗೆ ಕೋಪ ಹೆಚ್ಚಿಸಿ, ಸೊಸೆಗೆ ಬೆತ್ತದ ಪೂಜೆ ಮಾಡಿಸುತ್ತಿದ್ದರು. ಇಂತಹ ಕಲ್ಲೆದೆಯ ಮಾವ–

ತಾಳ್ಮೆಯಲ್ಲಿ ಕುಸುಮಕೋಮಲೆಯಾದ ವತ್ಸಲೆಯ—'ಮಾವ–ಸೊಸೆ ವಾತ್ಸಲ್ಯ' ಇತರರಿಗೆ 'ಆದರ್ಶ'ವಾದೀತೇ ?

ಮಧುಸೂದನರಾಯನೂ ಕಡಿಮೆ 'ಅಸಾಮಿ'ಯಲ್ಲ. ಜನರ ತೋರಿಕೆಗೆ ಮಾತ್ರ 'ಸಂಭಾವಿತ'ನೆಂದು ನಟಿಸಿ, ತನ್ನ ಸಿರಿಸಂಪತ್ತಿನ ತೇಜಸ್ಸಿನಿಂದ ಇತರ 'ತಮೋಮಯಕಾರ್ಯ'ಗಳು ಪ್ರಕಟವಾಗದಂತೆ ಜನರ ಬಾಯನ್ನು ಮುಚ್ಚಿಸಿದ್ದನು. ಜನರು, ಪಾಪ! ಚಿನ್ನದಂತಹ ಹೆಂಡತಿಯನ್ನು ಕಳೆದುಕೊಂಡನು. ಆದರೂ ತನ್ನ ಮಗನ ಭವಿತವ್ಯದಲ್ಲಿ ಆತನಿಗೆಷ್ಟು ಆಸಕ್ತಿ! ವಂಶ ಉದ್ಧಾರವಾಗಲೆಂದು ಒಳ್ಳೆಯ ಮನೆತನನೋಡಿ ಬಂಗಾರದಂತಹ ಸೊಸೆಯನ್ನು ತಂದಿದ್ದಾನೆ! ಎಂದು ಮಾತನಾಡಿಕೊಳ್ಳುತ್ತಿದ್ದರು. ಆದರೆ ಒಳಗೆ........ಒಳಗೆ........ಅಂತರಾಳದೊಳಗೆ............ ಇವನ ಹುಳುಕು ಸಂಪೂರ್ಣವಾಗಿ ಅವರಿಗೆ ತಿಳಿದಿತ್ತು. ಜನರು ತನ್ನನ್ನು ಹೊಗಳುವುದರಿಂದ ಮಧುಸೂದನರಾಯನೂ ಗಾಳಿಯೂದಿದ ಚೆಂಡಿನಂತಾಗಿದ್ದನು. ತನ್ನ ಕೆಟ್ಟಕೃತ್ಯಗಳು ಬಯಲಿಗೆ ಬರಲಾರವೆಂಬ ಆತ್ಮವಿಶ್ವಾಸದಿಂದ, ಹೆಂಗಸರನ್ನು ಆಟದ ಚೆಂಡುಗಳಂತೆ ಉಪಯೋಗಿಸ ಹತ್ತಿದನು. ಇವನಂತಹ ಮನುಷ್ಯನು ಸೊಸೆಗೆ ಯಮಧರ್ಮರಾಯನಲ್ಲದೆ ಮತ್ತೇನು. ಮಧುಸೂದನರಾಯನೂ ಸ್ವಕಾರ್ಯ ಕುಶಲನು. ಮಗ ಯಶವಂತನನ್ನು ಯಾವುದಾದರೂ ನೆಪದಿಂದ ಅಲ್ಲಿ ಇಲ್ಲಿ ಹೋಗಿ ಬಾರೆಂದು ಕಳಿಸುವನು. ಆ ಮಗ ಯಶವಂತ........ಬೆಪ್ಪು ತಕಡಿ—ತಂದೆಯ ಹಂಚಿಕೆಯನ್ನು ತಿಳಿಯದೆ ಮೂರು ದಿನವೆಂದು ಮನೆಯನ್ನು ಬಿಟ್ಟರೆ, ಎಂಟುದಿನದ ನಂತರ ಮನೆಯನ್ನು ಸೇರುವನು. ಈ ಸದವಕಾಶವು ಮಧುಸೂದನರಾಯನಿಗೆ ಅನುಕೂಲವಾಗುತ್ತಿತ್ತು. ಜನರಿಲ್ಲದ ಅಷ್ಟು ದೊಡ್ಡ ಮನೆ........ ಮನೆ 'ಭಣ ಭಣ'ವೆನ್ನುತ್ತಿತ್ತು. ಸಮೀಪದಲ್ಲಿ ಬೇರೆ ಯಾರ ಮನೆಯೂ ಇಲ್ಲ. ಇದ್ದರೂ ಐವತ್ತು ಅರುವತ್ತು ಗಜ ದೂರದಲ್ಲಿ........ಇನ್ನು ಹತ್ತಿರದ ಸಂಬಂಧಿಕರಾರಾದರೂ—ಅದೂ ಕೂಡ ಹೆಂಗಸರೇ ಆದರೆ, ಮಧುಸೂದನರಾಯರ ಮನೆಯನ್ನು ಇಣಿಕಿ ಸಹ ನೋಡುವುದಿಲ್ಲವಾಗಿತ್ತು. ಕೇವಲ ಒಂದೆರಡು ರಾತ್ರಿಗಳವರೆಗೆ ಅವರ ಮನೆಯಲ್ಲಿ ಉಳಿಯುವುದೆಂದರೆ ಹೆಂಗಸರಿಗೆ ಅಸಹ್ಯಯಾತನೆಯಾಗುತ್ತಿತ್ತು. ಇದು ಸೊಸೆ ಮನೆಗೆ ಕಾಲಿಡುವ

ಮೊದಲಿನ ಸ್ಥಿತಿಯಾಗಿತ್ತು! ಈಗ! ಅವನಿಗೆ ಬೇರೆ ಹೆಂಗಸರ ಅಗತ್ಯವೇ ಇಲ್ಲವಲ್ಲ!........ಇದು ನೀಚ ಮಧುಸೂದನರಾಯನ ಕೊಂಕು ಬುದ್ಧಿಯ ನಂಜಿನ ಮುಳ್ಳು!

ಒಂದು ರಾತ್ರಿ!........ಎಲ್ಲೆಡೆಯಲ್ಲಿಯೂ ಬೆಳ್ದಿಂಗಳು ಹಾಲಿನಂತೆ ಚೆಲ್ಲಿತ್ತು. ತಂಪಾದಗಾಳಿ ಬೀಸುತ್ತಿದ್ದಿತ್ತು. ಮನೆಯಲ್ಲಿ ಮಗಯಶವಂತ ನಿಲ್ಲದ ಸನ್ನಿವೇಶ. ಹೆಂಡತಿ ರಮಾಬಾಯಿ ಈಗ ಇದ್ದಿದ್ದರೆ! ಥೂ, ಎಂತಹ ಕ್ರೂರವಿಧಿ! ಅವಳು ನನ್ನೊಡನೆ ಬಾಳ್ವೆ ನಡೆಯಿಸುವುದು ಸಹಿಸಲಾರದೆ ಯಮನು ಅಷ್ಟು ಬೇಗನೆ ಅವಳನ್ನು ತನ್ನ ಲೋಕಕ್ಕೆ ಒಯ್ಯಬಹುದೇ? ಆದರೆ ಈಗ ಸೊಸೆಯಾದರೂ ಯಾವುದಕ್ಕೆ ಕಡಿಮೆ? ಅಂದದಲ್ಲಿ ರತಿಯಂತಿದ್ದಾಳೆ ಈಗಿನ ಯಾವ ಸಿನೀಮಾ ನಟಿಗೆ ಕಡಿಮೆಯಾಗಿದ್ದಾಳೆ ಇವಳು! ಹೊರಗೆ, ಜನರ ಕಣ್ಣಿಗೆ 'ವತ್ಸಲೆ' ತನ್ನ ಸೊಸೆ ಹೌದು! ಆದರೆ, ಮಗನಿಲ್ಲದ ರಾತ್ರಿ... ...ಗಾಳಿಯು ಅಷ್ಟು ಆಹ್ಲಾದದಾಯಕವಾಗಿ ಬೀಸುತ್ತಿದೆ.......ಬೆಳುದಿಂಗಳ ಆಧಿಪತ್ಯ... ...ಇಷ್ಟು ಅನುಕೂಲವಾದ ಮುಹೂರ್ತ ಸನ್ನಿಹಿತವಾದಾಗ ಇಂತಹ ಸುಂದರಿಯಾದ 'ಹೆಂಗಸು' ತನ್ನ ವಶದಲ್ಲಿರುವಾಗ, ಏಕೆ ಭೋಗಿಸಿ, ಸುಖಪಡಬಾರದು?. ...... ಹೀಗೆ ಯೋಚನಾಗತಿಯಿಂದ ಆತನ ಕಾರ್ಯಕ್ಕೊ ಒಂದು ನಿಶ್ಚಿತ ಸ್ವರೂಪ ಬಂತು ಕೂಡಲೆ ಮೆಲ್ಲನೆ ಎದ್ದು ಸದ್ದು ಮಾಡದೆ, ಹೋಗಿ ವತ್ಸಲೆಯು ಮಲಗಿದ್ದ ಕೋಣೆಯ ಬಾಗಿಲನ್ನು ತೆರೆದನು. ವತ್ಸಲೆ ಆ ಬೆಣ್ಣೆ ಮುದ್ದೆ ಶಾಂತಚಿತ್ತದಿಂದ, ಸುಖವಾಗಿ ಮಲಗಿ ನಿದ್ರಿಸಿದ್ದಾಳೆ.... ...ಇವನಂತಹ ಕಾಮದ ಬಾಳಿಗೆ ಜೋತು ಬಿದ್ದ ಕ್ರಿಮಿ ತನ್ನನ್ನು ಕೀಟಲೆಗೊಳಿಸಲು ಬರುವುದೆಂದು ಅವಳಿಗವೆಂತು ವೇದ್ಯ? ಅವಳ ಮೈಮೇಲೆ ನೆರಳಿಲ್ಲದ ಈತನ ಕರಾಳಕ್ಕೈ ಚಾಚಿತು........ಅವಳಿಗೆ ಏನೋ ಹಾವಾಡಿದಂತೆ ಭಾನವಾಯಿತು. ಅವಳ ಎದೆಯು ಝುಲ್ಲೆಂದಿತು. ಕೂಡಲೇ ಎದ್ದಳು........ ಎದ್ದು ನೋಡುತ್ತಾಳೆ ಅವಳ ಮಾವ.......! 'ವತ್ಸಲಾ, ಬೇರಾರೂ ಇಲ್ಲಿ ಬರಲಿಲ್ಲ. ನಾನು.......ನಿನ್ನ ಮಾವ, ಭಯಪಡಬೇಡ, ನಿನ್ನೊಡನೆ ಭೋಗಿಸದ ಈ ಜೀವನ ವ್ಯರ್ಥ ನೀನು ಹಿರಿಯರು ಹೇಳಿದ ಮಾತಿಗೆ ಬೆಲೆಕೊಟ್ಟು, ಅನನ್ಯ ಶರಣ ಭಾವದಿಂದ ನಡೆಯುವುದು ನಿನ್ನ ಕರ್ತವ್ಯ,

ನನ್ನನ್ನು ನಿರಾಶೆಪಡಿಸಬೇಡ........ಮುಂತಾದ ಹುಚ್ಚುಚ್ಚು ಮಾತುಗಳ ನ್ನಾಡುತ್ತಾ ಮುಂದೆ ಸರಿದು, ಕಬ್ಬಿಣದಷ್ಟು ಗಟ್ಟಿಯಾದ ತನ್ನ ಕೈಗಳಿಂದ ಆಕೆಯನ್ನು ಎಳೆದುಕೊಂಡನು........ತನ್ನ ಪೈಶಾಚಿಕ ಶಕ್ತಿಯನ್ನು ಏನೂ ಅರಿಯದ ಮುಗ್ಧೆ—ಕೇವಲ ಮಗಳಿಗೆ ಸಮಾನಳಾದ, ಮೇಲಾಗಿ ಸೊಸೆಯ ಮೇಲೆ ಪ್ರಯೋಗಿಸಿದನು ಹೆಂಗಸು! ಅಬಲೆ!! ಅಸಹಾಯಸ್ಥಿತಿಯಲ್ಲಿ ದ್ದಾಳೆ ವತ್ಸಲಾ! ಆಕ್ಷಣಮಾತ್ರದ ಭೋಗದಿಂದ ಮಧುಸೂದನರಾಯನಿಗೆ ಸ್ವರ್ಗಲಭಿಸಿರಬಹುದು. ಆದರೆ ವತ್ಸಲೆಗೆ ಆ ಮನೆಯೇ ಯಮಲೋಕ ವೆಂದೂ ಮಾವನೇ ಯಮಧರ್ಮರಾಯನಾಗಿಯೂ ಭಾಸವಾಯಿತು. 'ದೇವಾ! ಕಾಮಾತುರಾಣಾಂ ನಭಯಂ ನಲಜ್ಜಾ' ಎಂಬ ಮಾತು ಇಷ್ಟು ನಿಜಸ್ವರೂಪವನ್ನು ತಾಳಿತೇ? ನಾನು ನೊಸೆ! ನನ್ನ ವಯಸ್ಸಿನವಳು ಅವನಿಗೆ ಮಗಳಿಗೆ ಸಮಾನ! ಮಾವ—ನೊಸೆಯರು ಎಷ್ಟು ಜನರಿಲ್ಲ ಲೋಕದಲ್ಲಿ? ಆದರೆ ಇಂತಹಮಾವ! ಅಹಲ್ಯಾಬಾಯಿ ಹೋಳ್ಕರ್'ವಾತ ಎಷ್ಟು ಆದರ್ಶಮಯವಾಗಿದೆ? ಆ ಮಾವನಿಗೆ ಸೊಸೆಯಲ್ಲಿರುವ ಪ್ರೀತಿ ವಾತ್ಸಲ್ಯ........ಯಾವತಂದೆಗೂ ಮಗಳಲ್ಲಿರಲಾರದು! ಅವರೆಲ್ಲ ಪುಣ್ಯ ವಂತೆಯರು. ನಾನು ಪಾಪಿ........ನನ್ನನ್ನು ಭೋಗವಸ್ತುವನ್ನಾಗಿ ಉಪ ಯೋಗಿಸಿಕೊಂಡ ಇವನು ಮಾನವನಲ್ಲ—ದಾನವ! ನನ್ನನ್ನು ಮಲಿನ ಗೊಳಿಸಿದನಲ್ಲಾ! ಅಯ್ಯೋ! ಹೆಣ್ಣು ಜನ್ಮವೇ! ರೂಪವು ವಿಷದಕುಂಭ ವೆಂಬುದು ಸುಳ್ಳಲ್ಲ. ಹೆಂಗಸಿಗೆ ರೂಪ ವೊಂದಿಲ್ಲವಾಗಿದ್ದರೆ, ಜಗತ್ತು ಇನ್ನೂ ಹೆಚ್ಚು ನೆಮ್ಮದಿಯಿಂದ ಬಾಳಬಲ್ಲುದೆಂದು ನನಗೆನಿಸುತ್ತದೆ. ಈದಿನ ನಡೆದ ಘಟನೆಯೊಂದು ನನ್ನ ಜೀವನ ನಾಟಕದಲ್ಲಿಯ 'ನಾಂದಿ'ಯಷ್ಟೆ. ಈತನ ಶಕ್ತಿ ಯುದ್ಧ........ಪೈಶಾಚಿಕಕಾರ್ಯ ಇನ್ನೆಷ್ಟು ದಿನ ನಡೆಯ ಬೇಕೋ........ಎಂದು ಗಳಗಳನೆ ಅತ್ತಳು. ಹಲವು ವಿಧದಿಂದ ಹಲು ಬಿದಳು. ಒಂದೇ ದಿನದಲ್ಲಿ ಬಾಡಿದ ಹೂವಿನಂತಾದಳು ಅವಳು ತನ್ನ ದುಃಖವನ್ನೆಲ್ಲಾ ಯಾರೆದುರಿಗೆ ತೋಡಿಕೊಳ್ಳುತ್ತಾಳೆ? ತೋಡಿಕೊಳ್ಳುವ ವಿಷಯವೇ ಇದು? ತಾನು ಮಾಡಿದ ಕೃತ್ಯವನ್ನು ಇನ್ನಾರಿಗಾದರೂ ಉಸುರಿದರೆ ನಿನ್ನನ್ನು ಕೊಂದೇ ಹಾಕುವೆನೆಂದು ಮಾವನು ಎಚ್ಚರಿಕೆಕೊಟ್ಟ ಮೇಲಂತೂ ಮುಂದಿನ ಚಿತ್ರ ಹಿಂಸೆಯ ಭವಿತವ್ಯದ ಕರಾಳರೂಪವನ್ನು

ಸೆನೆದು ವತ್ಸಲೆಯು ಬೆದರಿದ ಚಿಗರೆಯಾಗಿ ಬಿಟ್ಟಳು. ಹೀಗೆ ಮೂರು ನಾಲ್ಕು ದಿನ ನಡೆಯಿತು. ಒಂದುದಿನ, ಧೈರ್ಯಮಾಡಿ, 'ಮಾವ, ನೀವು ಹೀಗೆ ಮಾಡಿದರೆ ನಾನು ತುಂಬಿದ ಬಾವಿಯನ್ನು ಹಾರಿಕೊಳ್ಳುತ್ತೇನೆಂ' ದಳು. ಮಧುಸೂದನರಾಯನು ಗಹಗಹಿಸಿ ನಕ್ಕು, 'ಹಾರಿದರಷ್ಟೇ ಹೋಯಿತು. ಹಣವಿದ್ದರೆ, ನನ್ನ ಮಗನಿಗೆ ಒಂದಲ್ಲ ಎರಡಲ್ಲ........ ನಿನಗಿಂತ ಅಪ್ರತಿಮ ಸುಂದರಿಯರು ನಾಲ್ಕು ಜನ ಸೊಸೆಯರನ್ನು ತಂದೇನು, ನೀನು ಏನು ಮಹಾ........ಆ ಸಾವಿತ್ರಿಗಿಂತ ಮೀರಿಸಿದ್ದಲ್ಲ ನಿನ್ನ ಪತಿವ್ರತಾಧರ್ಮ........ಬೋಧಿಸುತ್ತಾಳೆ ನನಗೆ! ನಿನ್ನ ತಾಯಿ ಯಂತೂ ಆಹಾ! ಅವಳ ಹೆಸರೆಷ್ಟು ಚಂದ? ಅತ್ರಿಮುನಿ ಹೆಂಡತಿ ಯಲ್ಲ........ಯಾವಾಗಲೂ ಗಂಡನಿಗೆ ಕತ್ರಿ! ಇಂತಹ ಮನೆತನದಲ್ಲಿ ಹುಟ್ಟಿದ ನೀನು ಎಷ್ಟು ಶುದ್ಧಳಿರುವೆ? ತಾಯಿಗಿಂತ ಮಗಳೇನು ಕಡಿಮೆ? ಎಂದು ಹಂಗಿಸಿಮೂದಲಿಸಿದನು, ಹೀನಾಮಾನವಾಗಿ ಮಾತನಾಡಿದನು. ವತ್ಸಲೆಗೆ ಕಣ್ಣೀರು ಧಾರಾಕಾರವಾಗಿ ಹರಿಯಿತು. ಆದರೆ ಏನುಮಾಡು ತ್ತಾಳೆ? ಪಾಪ! ಹೆಂಗಸಿಗೂ ಕಣ್ಣೀರಿಗೂ ಹತ್ತಿರದ ಬಾಂಧವ್ಯ! ಆ ಕಣ್ಣೀರನ್ನೇ' ಸ್ನೇಹಮಾಡಿಕೊಂಡು ಬಿಟ್ಟಳವಳು........ಹೆಸರಿಗನುಸರಿಸಿ ತನಗಲ್ಲದ ಸೌಂದರ್ಯವನ್ನೇನೊ ಪಡೆದು ಬಂದಿದ್ದಳು........ಇವಳನ್ನು ನೋಡಿದರೆ ಸಿನೇಮಾನಟನಟಿಯರೂ ಕೂಡ ಮಂತ್ರಮುಗ್ಧ ಹಾವಿನಂತಾ ಗುತ್ತಿದ್ದರು.......ಆದರೆ ಅವಳ ಈಗಿನ ಸ್ಥಿತಿ........ಮುಳ್ಳಿನ ಹಾಸಿಗೆ! ಈ ಪಿಶಾಚಿ ಮಾವನಿಂದ ತಪ್ಪಿಸಿಕೊಳ್ಳಲು, ಗಂಡನಮನೆಯನ್ನು ಬಿಟ್ಟು ಎಲ್ಲಾದರೂ ಹೋಗೋಣವೇ? ಅಲ್ಲಿ ಇನ್ನೊಂದು ತರದಕಷ್ಟ! ತಾಯಿಯ ಮನೆಗೆ ಹೋಗೋಣವೇ?........ಅಲ್ಲಿ ಸಮಾಜದ ಭದ್ರಕೋಟೆ............ ಅಲ್ಲಿಂದ ಬಹಿಷ್ಕಾರದ ಗುಂಡುಗಳು ಹಾರಬಹುದು. ಶಿವಶಿವಾ! ಹೆಣ್ಣು ಜನ್ಮ! ಹೆಂಗಸಿಗೇ ಇಂತಹ ಕಷ್ಟಗಳೇ? ಆಂತಹ ಕಷ್ಟಗಳನ್ನು ಅನುಭವಿ ಸಲು ದೇಹವನ್ನಾದರೂ ಗಟ್ಟಿಯಾಗಿರಿಸಿದೆಯಾ? ಇಲ್ಲ........ಅದೂ ಇಲ್ಲ ಕೇವಲ ಕುಸುಮ ಕೋಮಲಕಾಯ!

ಅಲ್ಲಿ ಇಲ್ಲಿ ತಿರುಗಿ ಗಂಡನು ಮನೆಗೆ ಬಂದ ದಿನ! ಮುಂಚಿನ ದಿನ ರಾತ್ರಿ ಮಾವ ಸೊಸೆಯ ಕಿವಿ ಹಿಂಡಿ, ಬಳೆ ಒಡೆದು ಉಂಟಾದ ಗದ್ದಲದಲ್ಲಿ

ಅವಳ ವಜ್ರದ ಬೆಂಡೋಲೆ ಹಾಸಿಗೆಯಲ್ಲೆಲ್ಲೋ ಬಿದ್ದುಹೋಗಿತ್ತು. ಅದನ್ನು ಮಧುಸೂದನರಾಯನು ಮಗನಿಗೆ ತೋರಿಸಿ, ' ನೋಡಯ್ಯ, ನಿನ್ನ ಹೆಂಡತಿಗೆ ವಜ್ರದ ಬೆಂಡೋಲೆಯನ್ನು ತಿಪ್ಪೆಗುಂಡಿಗೆಸೆಯುವಷ್ಟು ಶ್ರೀಮಂತಿಗೆ ಬಂದಿದೆಯೆಂದು ಕಾಣುತ್ತದೆ. ಏನು ಅವಳ ಒನಪು. ಒಯ್ಯಾರ! ಈಗಂತೂ ಕೆಲವು ದಿನಗಳಿಂದ ಸೊಂಟದವರೆಗೆ ಹೆಳಲುಹಾಕಿ, ರಿಬ್ಬನ್ ಕಟ್ಟಿ, ದಿವಸಕ್ಕೆ ಹತ್ತುಸಲ ಕನ್ನಡಿ ನೋಡಿಕೊಳ್ಳುತ್ತಾಳೆ........ಬೀದಿಯಲ್ಲಿ ಹೋಗುವ ಜನರನ್ನೆಲ್ಲಾ ನೋಡಿಕೊಳ್ಳುತ್ತಾಳೆ........ನಮ್ಮಂತಹ ಹಿರಿಯರಮಾತು ರುಚಿಸದು ಇವಳಿಗೆ... ...ಮಗಾ ಯಶವಂತಾ ನೀನೇ ನೋಡಿಕೋ ನಿನ್ನ ಹೆಂಡತಿಯನ್ನು! ಅಂತೂ ಕಾಲ ಚೆನ್ನಾಗಿಲ್ಲಾ, ಜೋಕೆ! ಎಂದನು. ಮಂಗತನದಲ್ಲಿ ಗಿಡಮಂಗನಾದ ಯಶವಂತನು ವತ್ಸಲೆಯನ್ನು ದರದರ ಎಳೆದು ಕೈಕಾಲು ಕಣ್ಣೆಂದು ನೋಡದೆ ಚೆನ್ನಾಗಿ ಥಳಿಸಿದನು. ವತ್ಸಲೆಯು ಅಯ್ಯೋ! ಅಮ್ಮಾ... ...ಅಪ್ಪಾ ಎಂದು ಬಾರಿ ಬಾರಿಗೆ ಪ್ರತಿಯೊಂದು ತಾಡನವನ್ನೂ ಸಹಿಸದೆ ಬೊಬ್ಬಿಟ್ಟಳು. ಕಾಲಿನಿಂದ ಅವಳನ್ನು ಒದೆದನು........ಬೆಂಕಿಕೊಳ್ಳಿಯಿಂದ ಅವಳನ್ನು ತಿವಿಯಲು ಹೋದನು ..... ಬೆನ್ನಿನ ಮೇಲೆ ದುಢುಂ ದುಢುಂ ಎಂದು ಗುದ್ದಿದನು. ಹೀಗೆ ಗಂಡ ಯಶವಂತನು ತನ್ನ ಪ್ರೇಮಮಣಿಯಾದ ವತ್ಸಲೆಯನ್ನು ತೃಪ್ತಿಯಾಗುವವರೆಗೆ ಹೊಡೆದು ಒಂದು ಮೂಲೆಗೆ ಕೆಡವಿದನು, ಕಟ್ಟಕಡೆಗೆ ಬಲವಾಗಿ ಒದ್ದನು, ಅಯ್ಯೋ! ಇಂತಹ ಅವಿವೇಕಿಗಳಿಗೂ ಹೆಂಡತಿ, ಮದುವೆ..... ಎಂಬ ಶಬ್ದಗಳು ಅರ್ಥವಾಗುವುದಿಲ್ಲವೇ? ಹಾಗಾದರೆ ಇಂತಹ ಗಂಡಸರಿಗೆ ಒಡನಾಡಿಗಳೇಕೆ? ಪರಮಾತ್ಮನ ಸೃಷ್ಟಿಯಲ್ಲೇ ಇಂತಹ ಸುಂದರಿ ಇದ್ದುದು ನಮ್ಮ ಭಾಗ್ಯ, ಇವಳ ಕೈ ಹಿಡಿಯುವುದೇ ಪುಣ್ಯ. ಇವಳೊಡನೆ ಬಾಳ್ವೆ ನಡೆಯಿಸುವುದೇ ಇಹಪರಕ್ಕೆ ಸಾಧನವೆಂದು—ಇವಳೊಡನೆ ನಡೆಯಿಸುವ ಪ್ರೇಮಾಲಾಪವೇ ಜೀವನದ ಚೈತನ್ಯ ಶಕ್ತಿ........ಇವಳೇ ಅಧಿದೇವತೆ........ನಾರೀರತ್ನವೆಂದು ಇತರರು ಭಾವಿಸಿದರೆ, ಮೂರ್ಖ ಯಶವಂತನು ವತ್ಸಲೆಯು ಗಾಡಿಯ ನೊಗಕ್ಕೆ ಕಟ್ಟುವ ಎತ್ತು, ಅಗಸನಸೇವೆ ಮಾಡುವ ಹೇಸರಕತ್ತೆಯೆಂದು ಭಾವಿಸಿದನು. ಎತ್ತು ತೆಂಗಿನಕಾಯ ಬಲ್ಲುದೆ....ಕತ್ತೆ ಬಲ್ಲುದೆ ಕತ್ತುರಿಯ ಎಂಬುದು ಯಶವಂತನಿಗೆಷ್ಟು ಸಮಂ

ಜಸವಾಗಿದೆ! ಅವಳ ದುಃಖವನ್ನು ನೋಡಿ ಮರುಗುವವರು ಯಾರು? ಅವಳ ನೋವನ್ನು ನೋಡಿ ಕನಿಕರಿಸುವವರಾರು? ಅವಳ ಜನರು ಯಾರಿದ್ದಾರೆ ಅಲ್ಲಿ? ಶಕುನಿಯ ಅವರಾವತಾರಿ ಮಾವ! ಯಮಸ್ವರೂಪಿ ಗಂಡ!! ಇವರಿಬ್ಬರ ಅಡಕತ್ತರಿಯಲ್ಲಿ ಸಿಕ್ಕಿದ ಎಳೆಯ ಅಡಿಕೆ–ವತ್ಸಲಾ! ಯಶವಂತನು ಅವಳಿಗೆಷ್ಟು ಹೊಡೆದನೋ........ವತ್ಸಲೆ ಆ ನೋವನ್ನು ಹೇಗೆ ಸಹಿಸಿದಳೋ ಅದನ್ನು ಇಲ್ಲಿ ವರ್ಣಿಸುವುದು ಸಾಧ್ಯವಲ್ಲದ ವಿಷಯ! ಒಂದು ವೇಳೆ ವರ್ಣಿಸಿಯೂ ಹೆಣ್ಣು ಮಕ್ಕಳನ್ನು ಹಡೆದ ತಾಯಂದಿರ ಕರುಳನ್ನು ಹಿಸುಕುವ ಪಾಪದ ಕೆಲಸ ನನಗೇಕೆಂದು ಅದನ್ನು ಕಲ್ಪನೆಯ ಸಾಮ್ರಾಜ್ಯಕ್ಕೆ ಬಿಟ್ಟಿರುತ್ತೇನೆ ಪಾಪ! ಬಡವರಾಗಿ ಹುಟ್ಟಿದುವೇ ತಪ್ಪೆ? ಅದರಲ್ಲೂ ಬಡವರಮನೆ ಹೆಣ್ಣುಮಗಳಾಗಿ... ...ಇನ್ನೂ ಮುಂದಿನ ಅನರ್ಘ–ಸುಂದರಿಯಾಗಿ.... ...ಹೀಗೆ ಹುಟ್ಟಿದರೆ ವತ್ಸಲೆಗಾದ ಕಷ್ಟಪರಂಪರೆಗಳೇ ಸಂಭವಿಸುವುವೆಂದು ಸ್ಫಟಿಕ ಸ್ಪಷ್ಟವಾಗಿ ಊಹಿಸಬಹುದಲ್ಲವೇ? ದ್ರೌಪದಿಯ ಸೀರೆಯನ್ನು ಸೆಳೆಯಲು ಹೋದ ದುಶ್ಶಾಸನನಿಗೂ ಆಯಾಸವಾಗಿ, ಬಳಲಿ, ಬೆಂಡಾಗಿ, ಬಸವಳಿದು ಬಿದ್ದನಂತೆ! ಆದರೆ ಈ ನೀಚ ಯಶವಂತನಿಗೆ ಹೆಂಡತಿಯನ್ನು ಹೊಡೆಯುವಾಗ ಅದೆಷ್ಟು ಸಂತೋಷ! ಅದೆಷ್ಟು ಉತ್ಸಾಹಪೂರಿತ ಹಾರಾಟ? ಅದೊಂದು ಪುರುಷಾರ್ಥದ ಕೆಲಸ ಅವನಿಗೆ! ಆ ಮುದ್ದು ಬಾಲೆಯನ್ನು ಹೊಡೆಯುವ ಕೈ ಏಕೆ ಮುರಿಯಲಿಲ್ಲವೋ .......ಅವಾಚ್ಯ ಶಬ್ದಗಳನ್ನು ಆಡಿದ ನಾಲಿಗೆ ಏಕೆ ಸೀದುಹೋಗಲಿಲ್ಲವೋ........ಅಂತೂ, ಹೊಡೆದ, ಹೊಡೆದ, ಹೊಡೆದ! ಇದರಿಂದ ವತ್ಸಲೆಯ ಮಾವನಿಗೆ ಮಾತ್ರ ಅತ್ಯಾನಂದವಾಯಿತು. ವಂಶ ಪಾರಂಪರ್ಯವಾಗಿ ಮನೆಯಲ್ಲಿ ಹೆಂಗಸರಿಗೆ, ಅದೂ ಅಡಿಗೆಯ ಮನೆಯಲ್ಲಿ ಭಯಂಕರ ಮೂರ್ತಿಯಾಗಿ–ಹೆಂಡತಿಗೆ ಹೊಡೆದೂ ಹೊಡೆದೂ ತಮ್ಮ ಅಧಿಕಾರಕ್ಕೆ ಚ್ಯುತಿ ತರದೆ ಇದ್ದಕಾಲದ ನೆನಪು ಬಂದು, ಮಗ ಯಶವಂತನೂ ಅದೇ ಉದ್ಯಮವನ್ನು ಮುಂದರಿಸಿದನಲ್ಲಾ! ಮಗನಿಗೆ ಮಿಾಸೆ ಬಂದು, ಮನೆಗೆ ಸೊಸೆ ಬಂದಾಗ, ಸೊಸೆಯನ್ನು ಮಗ ಹೊಡೆಯುವ ಸುಮುಹೂರ್ತ ಬಂದಾಗ, ಹಿರಿಯರಿಗೆ ಆಗ ನಿಜವಾಗಿಯೂ ಒಂದು ರೀತಿಯ ಸಂತೋಷವಾಗುತ್ತದೆಂದು ನನ್ನ ಭಾವನೆ! ಇದೇ ಸಂತೋಷ

ಮಧುಸೂದನರಾಯರಿಗೆ ವ್ಯಾಪಿಸಿತು. ಹೆಂಡತಿಗೆ ಹೊಡೆಯುವುದೂ ಪೌರುಷವಲ್ಲವೇ? ಎಷ್ಟು ಜನ ಗಂಡಂದಿರಿಗೆ ಈ ಭಾಗ್ಯ ಈಗಿದಿಯೋ ನಾನು ಹೇಳಲಾರೆ. ಗಂಡಂದಿರು ಹೆಂಡಂದಿರ ಕೈಗೊಂಬೆಯಾಗಿರುವುದೇ ಈಗಿನ ನಾಗರಿಕತೆಯ ಕಾಲದಲ್ಲಿ .......ಸ್ತ್ರೀ ಸ್ವಾತಂತ್ರ್ಯದಕಾಲದಲ್ಲಿ... ... ಹೆಚ್ಚು ರೂಢಿ! ಸಾಧ್ಯವಾದರೆ ಹೆಂಡಂದಿರಿಂದ 'ಪ್ರಹಾರ' ಸ್ವೀಕರಿಸುವುದೂ ನಿತ್ಯದ ರೂಢಿಯಾಗಿದೆ. ಇದು ಕಾಲದ ಮಹಿಮೆ! ಯುಗದ ಧರ್ಮ!! ಎಂದು ನೀವು ಆಕ್ಷೇಪಿಸಬಹುದು. ಆದರೆ ಇಂತಹ ಗಂಡಂದಿರನ್ನು ನೋಡಿ ನಾನು ನಕ್ಕೇನು ವಿನಾ ಅಳಲಾರೆ. ಗಂಡಸರಿಗಾಗಿ ಗಂಡಸರು ಅಳುವುದೇ? ಮೇಲಾಗಿ ಹೆಂಗಸರ ಪೆಟ್ಟು ಗಂಡಸರಿಗೆ ಅಷ್ಟೇನೂ ವೇದನಾದಾಯಕವಲ್ಲ. ಗಟ್ಟಿ ಶರೀರ! ಮತ್ತು ಒಂದು ಕಾಲದಲ್ಲಿ ಹೆಂಡಂದಿರನ್ನು ಹಿಂಡಿ ಹಿಪ್ಪೆಮಾಡಿದ ಗಂಡಂದಿರಿಗೆ ಕಾಲದ ಪ್ರಭಾವದಿಂದ–ವಿಧಿಯ ದುರ್ವಿಪಾಕದಿಂದ–ಹೆಂಡಂದಿರಿಂದ ತಕ್ಕ ಪ್ರಾಯಶ್ಚಿತ್ತವಾಗುವುದನ್ನು ನಾನು ಅಲ್ಲಗಳೆಯಲಾರೆ! ಸೊಸೆ ವತ್ಸಲೆಯೆಂದರೆ ಮಾವ ಮಧುಸೂದನರಾಯರ ದೃಷ್ಟಿಯಲ್ಲಿ ಪಾತ್ರ ಹಟಮಾರಿ! ಆಗಾಗ ತಾನು ಮಾವನೆಂದು ಸ್ವಲ್ಪವೂ ಲೆಕ್ಕಿಸದೆ ದಿಟ್ಟತನವನ್ನು ತೋರಿಸುವ ವತ್ಸಲೆಗೆ ತಕ್ಕ ಶಿಕ್ಷೆಯಾಯಿತೆಂದು ಮನದಲ್ಲೇ ಹಿರಿಹಿರಿ ಹಿಗ್ಗಿದರು. ಮುಂದಾದರೂ ಒಳ್ಳೆಯ ದಾರಿಗೆ ಬಂದರೆ, ತನಗೇ ಅನುಕೂಲವೆಂದು ಲೆಖ್ಖಾಚಾರ ಮಾಡಿದರು. ಒರಟು ಬುದ್ಧಿಯನ್ನು ಬಿಟ್ಟು, ಸ್ವಪ್ರೇರಣೆಯಿಂದ ತನ್ನ ಕಡೆಗೇ ವಾಲಿದರೆ ಮನೆ–ಊರು ತುಂಬ ಗಲಾಟೆಯಿಲ್ಲದೆ, ಕದ್ದು ಮುಚ್ಚಿ ಸೊಸೆಯನ್ನು ವಿಷಯವಾಸನೆ–ಭೋಗದ ಬಲೆಯಲ್ಲಿ ಕೆಡಹ ಬಹುದಲ್ಲವೇ? ಎಂತಹದುಷ್ಟ ಬುದ್ಧಿ! ಭಯಂಕರ ಪಾಪ ವಾಸನೆ!! ಇಂತಹ ಮಾವಂದಿರಿಗೆ ಹೊಸದೊಂದು ನರಕ ನಿರ್ಮಿಸುವುದರಲ್ಲಿ ಬಂದೀತೆಂದು ಕಾಣುತ್ತದೆ.

ಇವರ ಮನೆಯಲ್ಲಿ ನಡೆದ ಗಲಾಟೆ ಹೇಗೋ ಹೇಗೋ ಊರಿನ ಜನರಿಗೆ ತಿಳಿದು, ವತ್ಸಲೆಯ ಸೋದರಮಾವನ ಮಗ ಗೋಪಾಲಯ್ಯನ ಕಿವಿಯವರೆಗೂ ಹಬ್ಬಿತು. ಸರಳ ಜೀವನ ನಡೆಯಿಸಿಕೊಂಡು ಅದೇ ಊರಿನಲ್ಲಿದ್ದ ಗೋಪಾಲಯ್ಯನು ಈ ವಾರ್ತೆಯನ್ನು ಕೇಳಿ ನೆಲಕ್ಕೆ ಕುಸಿದು

-ಬಿಟ್ಟನು. ವತ್ಸಲೆಯ ಚಿಕ್ಕಿಯ ಮಗಳಾದ ಜಲಜಾಕ್ಷಿಯನ್ನು ಅವನಿಗೆ ಕೊಟ್ಟಿದ್ದರು. ಗೋಪಾಲಯ್ಯ ಮತ್ತು ಜಲಜಾಕ್ಷಿಯರೆಂದರೆ ಹಾಲು-ಜೇನು! ವತ್ಸಲೆಯ ನಿರ್ಭಾಗ್ಯವನ್ನು ನೆನೆದು, ಕೂಡಲೇ ಮಾವ ಕೃಷ್ಣ ಮೂರ್ತಿರಾಯರಿಗೊಂದು ವಿಶದವಾಗಿ ಪತ್ರವನ್ನು ಬರೆದನು. 'ಹದ್ದಿನ ಬಾಯಿಗೆ ಬೀಳಲಿರುವ ಪಾರಿವಾಳವನ್ನು ತಪ್ಪಿಸಿಕೊಂಡು ಹೋಗುವುದು'-ಎಂದು ಗೂಢಾರ್ಥದಿಂದಲೂ ಬರೆದಿದ್ದನು.

ಈ ಪತ್ರವನ್ನು ಓದಿದ ಕೃಷ್ಣಮೂರ್ತಿರಾಯರು 'ಸಿಡಿಲೆರಗಿದ ಬಾಳೆಯಮರ'ದಂತಾದರು. ಹೆಂಗಸಿನಂತೆ, ಸಣ್ಣ ಮಕ್ಕಳಂತೆ ಗಳ ಗಳನೆ ಅತ್ತರು. ಅನಸೂಯೆಯಂತೂ ಕಣ್ಣೀರಿನ ಕಾಲುವೆಯನ್ನೇ ಹರಿಯಿಸಿ ದಳು. ಒಂದು ಅನಿಶ್ಚಿತಕಾಲದವರೆಗೆ ಅವರ ಮನೆಯಲ್ಲಿ ಮಸಣದ ಶಾಂತಿ ಆವರಿಸಿತ್ತು. ಅಯ್ಯೋ! ನನ್ನ ಚಿನ್ನಾ ವತ್ಸಲಾ! ನಿನಗೆ ಇಂತಹ ಆಪತ್ತು ಒದಗಿತೇ? ಹೀಗಾಗುವುವಕ್ಕಿಂತ ಮದುವೆಯೇ ಆಗದಿದ್ದರೆ ಚೆನ್ನಾಗಿದ್ದಿತ್ತಲ್ಲವೇ? ಎಂತಹ ಕಷ್ಟ ಒದಗಿತಲ್ಲಮ್ಮಾ ನಿನಗೆ! ಆದಿನ ಮದುವೆಯ ನಿಶ್ಚಯಕ್ಕೆ ಬಂದಾಗ ನಿನ್ನ ಮಾವ ಎಂತಹ ಸಾಧುಪ್ರಾಣಿ ಯಾಗಿ ಕಂಡು ಬಂದ? ಇಂತಹ ಕಟುಕನೆಂದು ಯಾರಾದರೂ ಊಹಿಸು ವುದು ಶಕ್ಯವೇ? ಇಂತಹಥೇನು ಮುಖವ್ಯಾಘ್ರನ ಕೈಯಲ್ಲಿ ಸಿಕ್ಕಿದೆಯಾ ನನ್ನ ಕಂದಮ್ಮಾ! ಎಂದು ವಿಧವಿಧದಿಂದ ಪ್ರಲಾಪಿಸಿದಳು ತಾಯಿ. ತಾಯಿಯ ಕರುಳು! ಯಾರಿಗೇನಾಗದಿದ್ದರೂ ತಾಯಿಯ ಕರುಳಿಗೆ ಪರಿ ಣಾಮವಾಗದೆ ಇರುತ್ತದೆಯೇ? ತಾಯಿಯ ಕರುಳಿನಮಾಲೆ ಕೋಮಲ ವಾದ-ಮೃದುವಾದ ಹೂಮಾಲೆಗಿಂತ ಮೃದು! ಆದರೆ ತಾಯಿ ಏನು ಮಾಡುತ್ತಾಳೆ? ಕಡಿಯುವ ಕಟುಕನಿಗೆ ದಯೆ ಇದೆಯೇ? ಅಂತೆಯೇ ಕಾಮಾಂಧಕನಿಗೆ 'ಪ್ರೇಮ' ಕೂಡ ಕುರುಡು. ಕೊಟ್ಟ ಹೆಣ್ಣು ಕುಲಕ್ಕೆ ಹೊರಗೆ! ಹೌದು! ಹಾಗೆಂದು ಯಾವ ಮಹಾತಾಯಿ ಮನಸ್ಸನ್ನು ಕಲ್ಲು ಮಾಡಿಯಾಳು? ಹೆಂಗಸರ ಮನಸ್ಸು ಹೂವಿಗಿಂತ ಹಗುರ........ಕರುಳು ಹೂವಿಗಿಂತ ಕೋಮಲ! ಆದುದರಿಂದ ಹೆತ್ತ ಕರುಳು ಕೇಳಬೇಕಲ್ಲ....... ಕರುಳು ಕೂಗಿಕೂಗಿ ವತ್ಸಲೆಯನ್ನು ಮನೆಗೆ ಕರೆತರುವ ಆಣತಿಯನ್ನಿ ತ್ತಿತು! ಕೆಲವು ದಿನಗಳ ಮಾತಿಗೆ ವತ್ಸಲೆಯನ್ನು ಇಲ್ಲಿಗೆ ಕರೆಸೋಣವೆಂದು

ಗಂಡನನ್ನು ಪ್ರಾರ್ಥಿಸಿದಳು. 'ತಾಯಿಗೆ ಕಾಹಿಲೆ' ಎಂದು ಬರೆದರೆ ಮಗಳನ್ನು ಕಳಿಸಿಯೇ ಕಳಿಸುವರೆಂದೂ, ಹಾಗೆ ಪತ್ರ ಬರೆಯಬೇಕೆಂದೂ ಗಂಡನಿಗೆ ಸಲಹೆ ಕೊಟ್ಟಳು ವ್ಯವಹಾರ ಚತುರೆ–ಅನಸೂಯಾ. ಹಾಗೆ ಬರೆದುದೂ ಮಧುಸೂದನರಾಯರ ವಿಳಾಸಕ್ಕೆ ಪತ್ರ ಹೋಗಿ ಮುಟ್ಟಿದುದೂ ಆಯಿತು. ಅನಸೂಯೆಯ ನಿರೀಕ್ಷಣೆಯೂ ನಿಜವಾಯಿತು. ಮಹಾನು ಭಾವ–ದೊಡ್ಡ ಮನಸ್ಸುಮಾಡಿ ಸೊಸೆಯನ್ನು ತವರು ಮನೆಗೆ ಕಳಿಸುವ ನಿರ್ಧಾರಕ್ಕೆ ಬಂದುದೇ ವತ್ಸಲೆಯ ಪುಣ್ಯ ಫಲವೆಂದು ಭಾವಿಸಬಹುದು. ಮನಸ್ಸು ಇದ್ದೋ ಇಲ್ಲವೋ–ಅಂತೂ ಸೊಸೆಯನ್ನು ಬಿಂದುಪುರಕ್ಕೆ ಕಳಿಸಿ ಎಂಟೇ ದಿನಗಳಲ್ಲಿ ಹಿಂತಿರುಗಬೇಕೆಂದು ಕಟ್ಟಪ್ಪಣೆಮಾಡಿದನು. ಯಶ ವಂತನೇ ಸ್ವತಃ ಹೆಂಡತಿಯನ್ನು ಕರೆದುಕೊಂಡು ಮಾವನ ಮನೆಗೆ ಬಂದು ಅದೇ ದಿನವೇ ಊರಿಗೆ ಹಿಂತಿರುಗಿದನು. ಅತ್ತೆಗೆ ಕಾಹಿಲೆ ಸುಳ್ಳೆಂದೂ ಮಗಳು ಗಂಡನಮನೆಯಲ್ಲಿ ಬಾಳ್ವೆ ಮಾಡುವುದು ಸರಿಬೀಳದೆ ಅವಳನ್ನು ವೇಶ್ಯಾವೃತ್ತಿಗೆ ದೂಡಬೇಕೆಂದು ಹಂಚಿಕೆ ಮಾಡಿರುವಳೆಂದೂ ತನ್ನ ಯೋಚನಾ ಮುಕ್ತಾಫಲಗಳನ್ನು ತಂದೆಗೆ ನಿವೇದಿಸಿದನು. ಈಗಿನ ಲೋಕದನ್ಯಾಯ ಈ ದಿಸೆಯಲ್ಲಿ ಹರಿಯುತ್ತಾ ಇದೆ! ಲೋಕದ ಜನರೂ ಕಣ್ಣಿದ್ದೂ ಕುರುಡರಂತೆ–ಈ ಪ್ರವಾಹದ ಶಕ್ತಿಯಿಂದ ತಪ್ಪಿಸಿಕೊಳ್ಳಲಾರದೆ ಅಸಹಾಯರಾಗಿ–ಪ್ರವಾಹದಲ್ಲಿ ತೇಲುವ ತಟ್ಟೆಯಂತಾಗಿದ್ದಾರೆ. ಕಾಲ ಪ್ರವಾಹ–ತೇಲುವ ಜನ!

ವತ್ಸಲೆಯು ಹದಿನೆಂಟು ವರ್ಷದ ಹುಡುಗಿಯಾದರೂ ಎಂಬತ್ತು ವರ್ಷದ ಮುದುಕಿಯಂತೆ ಕಾಣಿಸಿಕೊಂಡು, ಮ್ಲಾನವದನದಿಂದ ಮನೆಗೆ ಬಂದಳು. ಮಂಗಳಸೂತ್ರದ ಭಾಗ್ಯವೇ ಭಾಗ್ಯ! ಮದುವೆಯಾದ ಮಗಳು—ಅಳಿಯ ಮಾವನ ಮನೆಗೆಷ್ಟು ಸಂತೋಷದಿಂದ ಬರುತ್ತಾರೆ— ಹೋಗುತ್ತಾರೆ! ಅತ್ತೆಗಂತೂ ಅಪರೂಪವಾಗಿಯೋ ಅಥವಾ ಪದೇ ಪದೇ ಬರುವ ಅಳಿಯನಿಗೇನು ಭಕ್ಷ್ಯ ಭೋಜ್ಯ ಮಾಡಿಹಾಕುವುದೆಂದು ದೊಡ್ಡ ಸಮಸ್ಯೆ! ಅಳಿಯ–ಮಗಳ ಸರಸಸಲ್ಲಾಪ! ಅತ್ತೆಯ ಸಡಗರ! ಮಾವನ ಗಾಂಭೀರ್ಯ ಮತ್ತು ಠೀವಿ—ಅಕ್ಕನ ಗಂಡನನ್ನು ಕದ್ದು ನೋಡುವ ತಂಗಿ– ತಮ್ಮನ ಸುಮಧುರ ಹಾಸ್ಯ—ಇವೆಲ್ಲಾ ಲೋಕಾಭಿರಾಮವಾಗಿದ್ದರೂ,

ಕೃಷ್ಣಮೂರ್ತಿರಾಯರಿಗೆ—ಅನಸೂಯೆಗೆ ಇಲ್ಲವಾಯಿತೇ? ಮಗಳನ್ನು ನೋಡಿದೊಡನೆಯೇ ತಾಯಿಗೆ ದುಃಖವನ್ನು ತಡೆಯುವುದಾಗಲಿಲ್ಲ. ತಾಯಿಯ ಕಣ್ಣೀರು ಗಂಗೆಯ ಪ್ರವಾಹವಾದರೆ ಮಗಳ ಕಣ್ಣೀರು ಯಮುನೆಯ ಪ್ರವಾಹವಾಯಿತು. ವತ್ಸಲೆಯು ತನಗೆ ಒಂದು ದಿನ ಮಾವನು ಕೊಟ್ಟ ಪೀಡೆ, ವಜ್ರದ ಬೆಂಡೋಲೆಯ ನೆಪದಿಂದ ಗಂಡ ಹೊಡೆದು ತನ್ನನ್ನು ಗಾಯಗೊಳಿಸಿದ್ದು. ಇವೆಲ್ಲವನ್ನೂ ತಾಯಿಗೆ ಹೇಳಿದಳು. ಅನಸೂಯೆ ಮಗಳನ್ನು ಬಾಚಿತಬ್ಬಿಕೊಂಡು ಗಳಗಳನೆ ಅತ್ತಳು. ಸೀರೆ ಸೇರಗೆಲ್ಲಾ ಕಣ್ಣೀರಿನಿಂದ ಒದ್ದೆಯಾಯಿತು. ಅದು ಒಣಗಲಿಕ್ಕೂ ವೇಳೆ ಎಲ್ಲಿ? ಕಣ್ಣೀರು........ಮತ್ತೆ ಮತ್ತೆ ಕಣ್ಣೀರು! ವತ್ಸಲೆಯು, 'ಅಮ್ಮಾ! .......ನೀನು ತುಂಬಿದ ಬಾವಿಯನ್ನಾದರೂ ಹಾರೆಂದರೆ ನಾನು ಸಿದ್ಧಳಿದ್ದೇನೆ. ಆದರೆ ಆ ಗಂಡ.......ಆತನಿಗಿಂತ ಭಯಂಕರವಾದ ಮಾವ ........ಅವರ ಮನೆಗೆ ನಾನು ಹೋಗಲಾರೆ' ಎಂದು 'ಗೊಳೋ' ಎಂದು ಅತ್ತುಬಿಟ್ಟಳು.

ವತ್ಸಲೆಯು ತವರು ಮನೆಗೆ ಬಂದು ತಿಂಗಳಾಗುತ್ತಾಬಂತು. ಮಾವ ಮಧುಸೂದನರಾಯರು ಮಗನಿಂದ ಕೃಷ್ಣಮೂರ್ತಿರಾಯರಿಗೊಂದು ಪತ್ರವನ್ನು ಬರೆಯಿಸಿದರು. ಪತ್ರದ ಮುಖ್ಯ ತಾತ್ಪರ್ಯವೇನೆಂದರೆ: "ಮಾವನವರಲ್ಲಿ ಯಶವಂತನು ಬೇಡುವ ಅಶೀರ್ವಾದಗಳು. ನಿಮ್ಮ ಮಗಳು ವತ್ಸಲೆ ಮನೆಗೆ ಹೋದಳೆಂದೇ ನಾನೂ ತಂದೆಯವರೂ ಕ್ಷೇಮದಿಂದ ಇದ್ದೇವೆ. ಈಗ ನಿಮ್ಮ ಕ್ಷೇಮಸಮಾಚಾರದ ವಿಷಯವನ್ನು ತಿಳಿದುಕೊಳ್ಳುವಷ್ಟು ವ್ಯವಧಾನ ನಮಗಿಲ್ಲವಾಗಿದೆ. ಇದಕ್ಕೋಸ್ಕರ ನಾನು ತುಂಬಾ ವಿಷಾದಪಡುತ್ತೇನೆ. ಸತ್ಕುಲಪ್ರಸೂತೆಯೆಂದು ನನ್ನ ತಂದೆ ನಿಮ್ಮ ಮಗಳನ್ನು ನನಗೆ ಮದುವೆಮಾಡಿಸಿದರು. ಈಗ ನೋಡಿದರೆ, ಕೆಲವು ದಿನಗಳಿಂದ ನಿಮ್ಮ ಮಗಳ ವರ್ತನೆಯು ನಮಗೆ ಸಂಶಯಕ್ಕಾಸ್ಪದ ಕೊಡುತ್ತಾ ಇದೆ. ಅವಳ ಒನಪು—ಒಯ್ಯಾರ........ಅಬ್ಬಬ್ಬ! ಸ್ನೋ.... ....ಪಾಂಡ್ಸ್‌ಕ್ರೀಮ್........ಕುಟಿಕುರಾ ಪೌಡರ್........ವೋಯಿಲ್ ಸೀರೆ ........ನಮ್ಮಂತಹ ವೈದಿಕ ಮನೆತನಕ್ಕೆ ಇಂತಹ ಹುಡುಗಿ ಬಂದರೆ ಅವಳಿಗೆ ಗಂಡನ ನೆನಪಾಗುವುದೇ ಕಷ್ಟ. ಮನೆಯ ಕೆಲಸದಲ್ಲೇ ಶ್ರದ್ಧೆ ಇಲ್ಲದೆ

........ಯಾವಾಗಲೂ ಭಾವಚಿತ್ರ, ಹಣ್ಣಿನ ಬುಟ್ಟಿ, ನಗೆ-ಹೊಗೆ, ಚಿತ್ರ ಕೂಟ—ಇನ್ನೂ ಏನೇನೋ ತಲೆಬುರುಡೆ-ಕಾದಂಬರಿಯನ್ನೋ ಕವನ ವನ್ನು ಓದಿಕೊಂಡು ಕಾಲಕಳೆಯುವ ನಿಮ್ಮ ‘ ಬಣ್ಣದ ಬೀಸಣಿಗೆ’— ವತ್ಸಲೆಯು ನನಗೆ ಬೇಡವೆಂದು ತಿಳಿಸಲು ಸಂತೋಷಪಡುತ್ತೇನೆ. ನಮ್ಮ ಕುಲ, ಗೌರವ, ಅಂತಸ್ತು, ಯೋಗ್ಯತೆಗಳಿಗನುಸರಿಸಿ, ನನ್ನ ತೀರ್ಥ ರೂಪರು ನನಗೆ ಇನ್ನೊಂದು ಲಗ್ನಮಾಡಿಸಲಿರುವರೆಂದು ನಿಮಗೆ ತಿಳಿಸ ಲಪೇಕ್ಷಿಸುತ್ತೇನೆ. ಸೌಭಾಗ್ಯವತಿಯ ಪಾಲಿಗೆ ನಾನಿಲ್ಲವೆಂದೇ ತಿಳಿಯ ಬೇಕಾಗಿ ಅರಿಕೆ. ಬೇಕಾದರೆ ಅವಳಿಗೆ ವೇಶ್ಯಾವೃತ್ತಿಯನ್ನು ಕಲಿಸಿ, ನಿಮ್ಮ ಜೀವನಯಾತ್ರೆಯನ್ನು ಸುಗಮವಾಗಿ ನಡೆಯಿಸಿರಿ. ವತ್ಸಲೆಗೆ ನನ್ನ ತಿರಸ್ಕಾರಗಳು. ಇಂತಿ ಕೊನೆಯ ನಮಸ್ಕಾರಗಳು—ಯಶವಂತ.”

ಕೃಷ್ಣಮೂರ್ತಿರಾಯರು ಪತ್ರವನ್ನು ಓದಿದರು. ಪ್ರತಿಯೊಂದು ಶಬ್ದವೂ ಅವರ ಸಿಟ್ಟನ್ನು ಕೆರಳಿಸಿತು. ಸೌಭಾಗ್ಯವತಿಯಲ್ಲವಂತೆ........ಅವಳ ಪಾಲಿಗೆ ನಾನಿಲ್ಲ!........ಅಹ! ಪತ್ರ ಬರೆಯುವಾಗಲೇ ಸತ್ತುಹೋಗಿ ದ್ದಾನೋ ಏನು ಮಣ್ಣೋ........ನನ್ನ ವತ್ಸಲೆಯಲ್ಲಿ ಕಳಂಕಹುಡುಕುವ ನೀಚ........ಅಳಿಯನಲ್ಲ! ವೇಶ್ಯಾವೃತ್ತಿ ಕಲಿಸಬೇಕಂತೆ........ಇವನಿಗೆ ಬೇಡಾದ ವಸ್ತುವಿಗೆ ಇವನದೇನು ಅಧಿಕಾರ! ಸೂಳೆಯಾಗುತ್ತಾಳೆ........ ಸಿನೇಮಾ ನಟಿಯಾಗುತ್ತಾಳೆ!-ಎಂದು ಅಳಿಯನಿಗೆ ಮತ್ತು ಮಧುಸೂದನ ರಾಯನಿಗೆ ಬಾಯಿಗೆ ಬಂದಹಾಗೆ ಬೈದು ‘ ರಪ್ಪ ’ ಎಂದು ಪತ್ರವನ್ನು ಮೇಜಿನ ಮೇಲೆ ಎಸೆದುಬಿಟ್ಟರು. ಆ ಶಬ್ದ ಕೇಳಿ ಒಳಗೆ ಮಜ್ಜಿಗೆ ಕಡೆಯು ತ್ತಿರುವ ಹೆಂಡತಿ ಅನಸೂಯಮ್ಮ ಹೊರಗೆ ಬಂದು, ಆ ಪತ್ರವನ್ನು ಬಿಚ್ಚಿ ಓದಿದಳು. ‘ ವಿಧಿ’ ತನ್ನ ಮಗಳನ್ನು ಇಂತಹ ಸ್ಥಿತಿಗೆ ತಂದಿತೇ ಎಂದು ಕೊಂಡು ಸುಮ್ಮನಾದಳು. ಗಂಡ ಹೆಂಡತಿ-ಇಬ್ಬರೂ, ‘ ಹಿಂದಿನ ಜನ್ಮ ದಲ್ಲಿ ಯಾರ ಹೊಟ್ಟೆ ಉರಿಸಿದ್ದೇವೋ ಅದು ಈ ಜನ್ಮದಲ್ಲಿ ನಮ್ಮನ್ನು ಕಾಡಲಿಕ್ಕೆ ಬಂದಿದೆಯೆಂದು ಕಾಣುತ್ತದೆ. ಈಗೀಗ ಬದಲಾಯಿಸುವ ಕಾಲದಲ್ಲಿ ಹೆಣ್ಣು ಹೆತ್ತವರ ಪಾಡು ನಾಯಿಪಾಡು ; ಸಮಾಜವೆಂಬ ಭೂತ ಯಾವ ವೇಳೆಯಲ್ಲಿ ನಮ್ಮ ಮೇಲೆ ತಿರುಗಿಬೀಳುತ್ತದೋ ಯಾರು ಬಲ್ಲರು ? ಗಂಡನನ್ನು ಬಿಟ್ಟ ಹೆಣ್ಣು, ಒಡೆದ ಮಡಿಕೆ—ಎರಡೂ ಒಂದೇಯಲ್ಲವೇ ?

ಎಂದು ಮನಸ್ಸಿನಲ್ಲೇ ತಳಮಳಿಸಿದರು. ಮನಸ್ಸೊಂದು ಗಾಳಿಯ ಕೋಳಿ ಯಾಯಿತು ಅವರ ಪಾಲಿಗೆ. ಜಾನಕೀದೇವಿಯಂತಹ ಮಗಳಿಗೂ ಇಂತಹ ಕಷ್ಟವೇ? ಶಿವ ಶಿವಾ........!

ಅತ್ತ ಮಧುಸೂದನರಾಯರು ಸೊಸೆಯ ವಿಷಯದಲ್ಲಿ ಸಾಧ್ಯ ವಾದಷ್ಟು ಅಪಪ್ರಚಾರವನ್ನು ಮಾಡಿ ಅವಳಲ್ಲಿದ್ದ ದ್ವೇಷವನ್ನು ತಿರಿಸಿಕೊಳ್ಳ ಬೇಕೆಂದು ಹವಣಿಸಿದರು. ದೊಡ್ಡ ಮನುಷ್ಯ! ಇವನ ಮಾತನ್ನು ಎಲ್ಲರೂ ನಂಬಿದರು. ಮಗನಾದ ಯಶವಂತನಂತೂ ಈಗ ಸಂಸಾರವಿಲ್ಲದ ಮನುಷ್ಯ! ಯಾರೆದುರಿಗೆ ಹೇಗೆ ಮಾತನಾಡಬೇಕೆಂದರಿಯದ ಪ್ರಾಣಿ! ತನ್ನ ಹೆಂಡತಿಯ ಅವಹೇಳನವನ್ನು ತಾನೇ ಮಾಡಿದರೆ, ಆಕೆಯ ಕೈಹಿಡಿದ ಗಂಡನಾದ ತನ್ನ ಮರ್ಯಾದೆಗೇ ಧಕ್ಕೆಬರುತ್ತದೆಂದೂ ತಿಳಿಯದ ಅವಿವೇಕಿ, ಒರಟು ಯಶವಂತ! ಹೋದ ಹೋದಕಡೆಯಲ್ಲಿ, ಹೆಂಡತಿ ಹಾಗೆ ಮಾಡಿ ದಳು—ಹೀಗೆ ಮಾಡಿದಳು, ಓರೆ ಬೈತಲೆ ಬಾಚಿದಳು, ಆ ಗೋಪಾಲಯ್ಯನ ಹತ್ತಿರ ಯಾವಾಗಲೂ ಮಾತನಾಡುತ್ತಿದ್ದಳು, ಇವಳು ಗರತಿಯಂತಿರದೆ ಸೂಳೆಯಂತಿದ್ದಳು; ಆದುದರಿಂದ ನಮ್ಮ ವಂಶಕ್ಕೆ ಕಳಂಕತರುವ ಹೆಣ್ಣೆಂದು ತಿಳಿದು ತವರುಮನೆಗೆ ಕಳುಹಿಸಿಬಿಟ್ಟೆ. ಮುಂತಾಗಿ ಕಾಸಿನ ಪ್ರಯೋಜನ ವಿಲ್ಲದ ಅಪೌರುಷೇಯ ಮಾತುಗಳನ್ನಾಡುತ್ತಿದ್ದನು.

ಕೆಲವೇ ದಿನಗಳಲ್ಲಿ ಮಧುಸೂದನರಾಯರು ಮಗನಿಗೆ ಇನ್ನೊಂದು ಮದುವೆಯನ್ನು ಮಾಡಿಸಿಯೇ ಬಿಟ್ಟರು. ಹೆಣ್ಣಿಗೇನು ಬರಗಾಲ! ಹುಡುಗಿಯ ಹೆಸರು ಗಜಲಕ್ಷ್ಮಿ. ದೂರದ ಮನೆತನ........ಮಧುಸೂದನ ರಾಯನ ಮಾಯಾಜಾಲ ಅವರಿಗೇನು ತಿಳಿಯುತ್ತದೆ? ಗಜಲಕ್ಷ್ಮಿಗೆ ಮೊದಲಿನ ಸೊಸೆಯಷ್ಟು ವಿಶೇಷ ಅಂದ ಚೆಂದವಿಲ್ಲದಿದ್ದರೂ ಯಾರು ಯಾರಿಗೆ ಹೇಗೆ ನಡೆದುಕೊಳ್ಳಬೇಕೆಂಬ ವಿದ್ಯೆ ಚೆನ್ನಾಗಿ ಸಾಧಿಸಿತ್ತು. ಮಾವ ಮತ್ತು ಗಂಡ: ಇವರಿಬ್ಬರ ಸೊತ್ತು ಆಗುವುದರಲ್ಲಿ ಇವಳದೇನೂ ಅಭ್ಯಂತರವಿಲ್ಲವೆಂದು ಕಾಣಿಸುತ್ತದೆ. ಆದುದರಿಂದ ಮಾವನಿಗೆ ಈ ಸೊಸೆ ಒಳ್ಳೆಯವಳು! ಗಿಣಿಯಂತೆ ಮುದ್ದು! ಆದರೆ ಗಂಡನಿಗೋ?—ಸುಂಗ ಲಾರದ ಉಗುಳು!

ಗಂಡ ಯಶವಂತನಿಗೆ ಕಾಲಕ್ರಮೇಣ ಮನಸ್ಸಿನಲ್ಲೇ ಒಂದು ವಿಧ

ವಾದ ಕೊರತೆ! ಹೇಳಲಾರದ ಸಂಕಟ!! ಈ ದುಷ್ಟಬುದ್ಧಿಯ ಅಪ್ಪನ ಮಾತು ಕೇಳಿ ಬೆಂಡೋಲೆ ನೆಪದಿಂದ ಆ ವತ್ಸಲೆಯನ್ನು ಪೈಮುರಿ ಹೊಡೆದೆ. ಹಾಗೆ ಹೊಡೆಯಬಾರದಿತ್ತು ನಾನು! ಎಷ್ಟು ಮುದ್ದು ಅವಳ ಮುಖ! ಅವಳ ಮಾತು ಎಷ್ಟು ನಯ! ಕೆಲಸ ಎಷ್ಟು ಚೊಕ್ಕ! ಅಪ್ಪನ ಮಾತು ಕೇಳಿ ಎಂತಹ ಕೆಸರ ಹೊಂಡದಲ್ಲಿ ಬಿದ್ದೆ ನಾನು? ಆ ಸುಂದರಿಯನ್ನು ಪುನಃ ಕೂಡುವ ಯೋಗ ನನಗೆ ಲಭಿಸೀತೇ?........ಈಗ ಬಂದಿದ್ದಾಳೆ ಹೆಣ್ಣು...........ಮನೆ ತೊಳೆಯುವ ಮಾರಿ! ನಡತೆಯೆಂದರೆ ಶೂರ್ಪನಖಿಯ ನೆನಪು ತರುತ್ತದೆ. ಅವಳಿಗೆ ಅಪ್ಪ ಬೇಕು........ನಾನು ಬೇಡ. ಬಹುಶಃ ಅಪ್ಪನ ಕಾಟವೇ ವಿಪರೀತವಾಗಿ ವತ್ಸಲೆ ತವರುಮನೆಗೆ ಹೋಗಿರಬಹುದು .......ಹೀಗೆ ಭಾವತರಂಗದಲ್ಲಿ ತೇಲಿ ತೇಲಿ ಒಣಗಿದ ಮರದ ಕೊರಡಿನಂತಾದನು. ಮಧುಸೂದನರಾಯರ ನಡತೆಯಲ್ಲೂ ಯಾವ ಸುಧಾರಣೆ ಕಂಡುಬರಲಿಲ್ಲ. ಹುಟ್ಟು ಗುಣ ಘಟ್ಟ ಹತ್ತಿದರೆ ಹೋಗುತ್ತದೆಯೇ? ಪುನಃ ವತ್ಸಲೆ ಮನೆಗೆ ಬಂದಿದ್ದರೆ ಅವಳ ಪಾದತೊಳೆದು ನೀರು ಕುಡಿವೇನೆಂದು ಭಾವಿಸಿದನು!........ಪಶ್ಚಾತ್ತಾಪದ ಫಲ ....... ಒಂದು ವಸ್ತು ಹತ್ತಿರವಿದ್ದಾಗ ಇಲ್ಲದ ಆದರ ದೂರವಿದ್ದಾಗ ಅಥವಾ ಅಗಲಿದಾಗ ಹೆಚ್ಚುತ್ತದೆಯಲ್ಲವೇ? ಹಾಗೇತಾನೆ! ಯಶವಂತನಿಗೆ ನಿಜವಾಗಿಯೂ ಕೆಟ್ಟಮೇಲೆ ಬುದ್ಧಿ ಬಂತು. ಕೊನೆಕೊನೆಗೆ ಆತನು ಮೊದಲಿನ ಹೆಂಡತಿಯ ಹುಚ್ಚಿನಿಂದಲೇ ಕೃಷ್ಣಪಕ್ಷದ ಚದ್ರನಂತೆ ಕೊರಗಹತ್ತಿದನು.

ಅತ್ತ ಬಿಂದುಪುರದಲ್ಲಿಯ ಕೃಷ್ಣಮೂರ್ತಿರಾಯರಿಗಂತೂ ಮನೋರೋಗ ಹಗಲೂ ಇರುಳೂ ಬಾಧಿಸುತ್ತಿದ್ದಿತು; ಅವರಿಗೆ ಮಗಳೊಬ್ಬಳು ದೊಡ್ಡ ಸಮಸ್ಯೆಯಾಗಿಬಿಟ್ಟಳು. ದಾರಿಯಲ್ಲಿ ತಿರುಗುವ ಎಲ್ಲಾ ತಲೆ ತಿರುಕರದೂ ಓರೆನೋಟ ವತ್ಸಲೆಯ ಕಡೆಗೆ! ಕೆಲವರಂತೂ 'ಕೃಷ್ಣರಾಯನಿಗೆ ಗತಿ ಇಲ್ಲ. ಮುದುಕ ಪಕ್ಕಾ ಘಾಟಿ! ಮದುವೆಮಾಡಿ ಮಗಳಿಗೆ 'ಪತ್ನಿ' 'ಮದುವೆಯಾದ ಹುಡುಗಿ' ಎಂದು ತಲೆ ಪಟ್ಟೆ ಹಚ್ಚಿ ಈಗ ಸೂಳೆತನ ಕಲಿಸಿ, 'ಉದರಂಭರಣ' ಮಾಡಿಕೊಳ್ಳಬೇಕೆಂದು ಗಂಡನ ಮನೆ ತಪ್ಪಿಸಿದ್ದಾನೆ' ಎಂದೂ ಹೇಳಿದರು. ಯಾವುದೋ ಕಾರಣದಿಂದ, ಗಂಡನ ಮನೆಯನ್ನು ಅನಿವಾರ್ಯವಾಗಿ ಬಿಟ್ಟುಬಂದ ಪ್ರಾಯದ ಹೆಣ್ಣು

ಹುಡುಗಿಯ ಅವಸ್ಥೆ, ಆಗ ತಾಯಿ ತಂದೆಯರ ಸ್ಥಿತಿ ಮತ್ತು ಊರಿನ ಜನರ ಮನೋಭಾವ—ಇವೆಲ್ಲಾ ಹಾಗೆ ಅಂತಹ ಹುಡುಗಿ ಮನೆಗೆ ಬಂದಾಗ, ಅಥವಾ ಮದುವೆಗೆ ನೆರೆದ ಹೆಣ್ಣು ಇದ್ದೂ ಅನೇಕ ಕಾರಣ ಗಳಿಂದ ಮದುವೆಮಾಡದಿದ್ದ ದಂಪತಿಗಳಿಗೆ ಇದು ನಿತ್ಯದ ಅನುಭವಸಿದ್ಧ ವಾದ ಮನೋಭಾವವಾಗಿದೆ. ಇದಕ್ಕೆ ಕೃಷ್ಣರಾಯ, ಅನಸೂಯಾದೇವಿ ಮತ್ತು ವತ್ಸಲೆ—ಹೊರತಾಗಿಲ್ಲವಷ್ಟೆ! ಜನರು ಹೊರಿಸುವ ಅಪವಾದ ದಗ್ನಿಯಲ್ಲಿ ಸುಟ್ಟು ಸುಟ್ಟು ಸುಣ್ಣವಾದರು ಗಂಡ-ಹೆಂಡತಿ! ಆಜಾನು ಬಾಹುವೂ ದೃಢಕಾಯರೂ ಆಗಿದ್ದ ಕೃಷ್ಣಮೂರ್ತಿರಾಯರು ಕಟ್ಟಕಡೆಗೆ ಒಂದು ' ಎಲುಬಿನ ಹಂದರ 'ವಾಗಿ ಬಿಟ್ಟರು. ಅನಸೂಯೆಯೂ ಹಾಗೇನೆ —ತಮ್ಮ ಪ್ರೀತಿಯ ಮಗಳಿಗೋಸ್ಕರ. ಎಲ್ಲರಿಗೂ ತಮ್ಮ ತಮ್ಮ ಮಕ್ಕಳ ಸುಖ-ಸಂತೋಷದಲ್ಲಿ ಭಾಗಿಯಾಗುವ ಕಾಲ ಅಪರೂಪವಾಗಿ ಒದಗ ಬಹುದು. ಆದರೆ ದುಃಖಿಸುವ ಭಾಗ್ಯ! ಇದನ್ನು ಪಡೆದ ತಂದೆತಾಯಿ ಧನ್ಯರಲ್ಲವೇ? ಶಕುಂತಳೆಯನ್ನು ಅಗಲುವ ಕಣ್ವಮುನಿ, ರಾಮನನ್ನು ಅಗಲಬೇಕಾದಾಗ ದಶರಥ, ಲೋಹಿತಾಶ್ವನಿಗಾಗಿ ಅತ್ತ ಚಂದ್ರಮತಿ— ಇಂತಹ ಜನರಿಗಿಂತ ಇನ್ನಾರು ಧನ್ಯರು? ನಮಗೊದಗುವ ಕೆಡಕಿನ ಕತ್ತಲೆಯ ಗವಿಯಿಂದಲೂ ಕೂಡ ಆಶಾಕಿರಣಗಳನ್ನು ಹುಡುಕುವ ಹೊಂಗ ನಸಿನ ಜನರೇ ವಿವೇಕಿಗಳಲ್ಲವೆ? ಸರಿ! ಈ ಮಾರ್ಗವನ್ನು ಅವಲಂಬಿ ಸಲು ತಕ್ಕ ಸಿರಿ-ಸಂಪತ್ತು, ಕಟ್ಟಕಡೆಗೆ ನೇರವಾಗಿ ಮಧ್ಯಾಹ್ನದ ವೇಳೆಗೆ ಹಸಿದು ಬಂದರೆ ಒಂದು ತುತ್ತು ಅನ್ನಕಾಣಿಸುವ ಸ್ಥಿತಿಯೂ ಇಲ್ಲದ ಕೃಷ್ಣ ಮೂರ್ತಿರಾಯರು ಹೆಂಡತಿ-ಮಕ್ಕಳನ್ನು ಹೇಗೆ ಸಾಕುತ್ತಾರೆ, ಸಲಹು ತ್ತಾರೆ? ಸಿರಿಸಂಪತ್ತಿದ್ದರೆ, ಅವರಿಗೆ ಮಗಳು ಹೆಚ್ಚೇ? ಬಡತನದ ಬೇಗೆ ಯಲ್ಲಿ ಬಳಲಿ, ಬೆಂಡಾದರೂ ಯಾರಿಗೆ ಮಕ್ಕಳು ಹೆಚ್ಚೆನಿಸುತ್ತದೆ? ವತ್ಸಲೆ ಯೊಡನೆ ತಮ್ಮ ಏಕನಾಥ! ಪಾಪ! ಜೀವನ ರಥ ನಡೆಯುವುದೇ ಕಷ್ಟ ವಾಗಿದೆ ಅವರಿಗೆ! ಅವರ ಸ್ಥಿತಿಯನ್ನು ನೋಡಿ ಯಾರು ಸಹಾನುಭೂತಿ ತೋರಿಸುತ್ತಾರೆ? ಈ ಎಲ್ಲಾ ಹಿಂದಿನ ಘಟನೆಗಳು ನಡೆದಾಗ ಏಕನಾಥನು ಮನೆಯಲ್ಲಿದ್ದಿಲ್ಲ. ಆತನು ಮಿಡ್ಲ್ ಸ್ಕೂಲ್ ದಾಟಿ, ಸುವರ್ಣಪುರದಲ್ಲಿ ಹೈಸ್ಕೂಲಲ್ಲಿ ಓದುತ್ತಿದ್ದನು.

ಇದ್ದುದರಲ್ಲೇ ಕೃಷ್ಣಮೂರ್ತಿರಾಯರಿಗೊಂದು ಸಂತೋಷ! ಒಂದು ದಿನ ಬೆಳಗ್ಗೆ ಮನೆಯ ಹೊರಗಿನ ಹಜಾರದಲ್ಲಿ ತಂದೆ–ಮಗಳು ಮಾತನಾಡುತ್ತ ಕುಳಿತಿದ್ದರು. ಅಷ್ಟರಲ್ಲಿ ಪೋಸ್ಟ್‌ಮ್ಯಾನ್ 'ಟೆಲಿಗ್ರಾಂ' ಒಂದು ತೆಗೆದುಕೊಂಡು ಬಂದನು. ಅದು ಏಕನಾಥನ ಸ್ನೇಹಿತರ ಪೈಕಿ ಯಾರೋ ಕಳುಹಿಸಿದುದಾಗಿತ್ತು—ಹೂರಣ ಹೊರಕ್ಕೆ ಬಿತ್ತು! 'ಏಕನಾಥನು ಇಡೀ ವಿಶ್ವವಿದ್ಯಾಲಯಕ್ಕೇ ಮೊದಲಿಗನಾಗಿ ಎಸ್. ಎಸ್. ಎಲ್. ಸೀ. ಪರೀಕ್ಷೆಯಲ್ಲಿ ತೇರ್ಗಡೆ ಹೊಂದಿರುತ್ತಾನೆ.' ಕೃಷ್ಣಮೂರ್ತಿರಾಯರ ಕಣ್ಣಿನಲ್ಲಿ ಆನಂದಬಾಷ್ಪ! ಮನೆ ಬೆಳಗುವ 'ನಂದಾದೀಪ' ಹೌದು!........ಇದರಲ್ಲಿ ಏನೂ ಸಂದೇಹವಿಲ್ಲ........ಅವರಿಗೆ ಮಗನಲ್ಲಿ ಒಂದು ಆಸೆ ಅಂಕುರಿಸಿತು. ತಮ್ಮನ್ನು ಬಡತನದ ಪಂಕದಿಂದ ಎತ್ತಿ ಉದ್ಧಾರಮಾಡುವ ವ್ಯಕ್ತಿ ಮಗನೇ ಸರಿ! ಎಂದು ಬಲವಾಗಿ ನಂಬಿಬಿಟ್ಟರು.

ಸುವರ್ಣಪುರದಲ್ಲಿ ವಾರಾನ್ನ ಮಾಡಿಕೊಂಡಿದ್ದ ಏಕನಾಥನನ್ನು ಶಂಕರರಾಯರು ತಮ್ಮ ಮನೆಯಲ್ಲೇ ಇಟ್ಟುಕೊಂಡಿದ್ದರು. ಶಂಕರರಾಯರು ಆಗರ್ಭಶ್ರೀಮಂತರು. ಅವರಿಗೆ ಒಬ್ಬಳೇ ಒಬ್ಬಳು ಹೆಣ್ಣು ಮಗಳು–ನಳಿನಿ. ಅವರಿಗೆ ಗಂಡು ಸಂತತಿಯೇ ಇರಲಿಲ್ಲ. ಏಕನಾಥನೂ ಒಳ್ಳೆಯ ಚಟುವಟಿಕೆಯುಳ್ಳವನು ಮತ್ತು ಮೇಧಾವಿ. ಅವನಿಗೆ ಬೇಕಾದಷ್ಟು ಕಲಿಸಿ, ತನ್ನ ಮಗಳನ್ನು ಅವನಿಗೆಕೊಟ್ಟು ಮದುವೆಮಾಡಿಬಿಡಬೇಕೆಂದು ಅವರ ಮನಸ್ಸು. ಹೀಗೆ ಶಂಕರರಾಯರ ಅಭೀಷ್ಟವಿರುವುದಾಗಿ ಏಕನಾಥನೂ ಅನೇಕ ಪತ್ರಗಳ ಮೂಲಕ ತನ್ನ ತಂದೆಗೆ ತಿಳಿಸಿದ್ದನು. ಇಡೀ ಸಂಸಾರದ ಆಗು–ಹೋಗು ಏಕನಾಥನ ಮೇಲಿದೆಯೆಂದೂ, ತನ್ನ ಜೀವನ ನಾಟಕ ಮುಗಿಯುತ್ತಾ ಬಂದಿದೆಯೆಂದೂ ಅವರಿಗೆ ಆಗ ಅನಿಸಿರಲಿಕ್ಕೆ ಸಾಕು. ಸಂಸಾರದಲ್ಲಿಯ ಕಷ್ಟ ಸುಖಗಳನ್ನು ನೋಡಿ ಅವರ ಕೂದಲು ಆಗಲೇ ಹಣ್ಣಾಗಿತ್ತು. ಇನ್ನೇನು ಬದುಕಬೇಕೆಂಬ ಆಸೆ ಅವರಿಗೆ? ಆದರೂ ಸಾಯಲಿಕ್ಕೆ ಮನಸ್ಸು ಬರುವುದಿಲ್ಲವಲ್ಲ! ಇಂತಹ ಕಣ್ಣಿಗೆ ಕಾಣುವ ಸುಂದರ ಜಗತ್ತನ್ನು ಬಿಟ್ಟು ಕಾಣದ ಲೋಕಕ್ಕೆ ಹೋಗಲು ಇಷ್ಟುಬೇಗನೆ ಆತುರಪಡುವುದೇ? ಹೆಂಡತಿ, ಮಗಳು, ಮಗ! ಊಹು!

ಇವರನ್ನು ಬಿಟ್ಟು ಹೋಗುವುದೇ?........ಇವೇ ಮೊದಲಾದ ಯೋಚನೆಗಳು ಕೃಷ್ಣಮೂರ್ತಿರಾಯರ ಹೃದಯವನ್ನು ಹಿಸುಕಿದವು; ಮನಸ್ಸನ್ನು ಅಲ್ಲೋಲ ಕಲ್ಲೋಲ ಮಾಡಿದವು. ವತ್ಸಲೆಗಂತೂ ತಮ್ಮನೆಂದರೆ ಪಂಚಪ್ರಾಣ. ತನ್ನ ಗತಿಯಂತೂ ಹೀಗಾಯಿತು. ಇದ್ದ ಒಬ್ಬ ತಮ್ಮನಾದರೂ ಓದಿ, ಒಳ್ಳೆಯ ಹೆಣ್ಣನ್ನು ಮದುವೆಯಾಗಿ, ತುಂಬಿದ ಬಾಳನ್ನು ಬಾಳಲೆಂದು ಅವಳ ಹಿರಿಯಾಸೆ. ತಮ್ಮ ದೊಡ್ಡ ಪರೀಕ್ಷೆ ತೇರ್ಗಡೆಹೊಂದಿ, ಮನವೊಪ್ಪುವ ಹೆಂಡತಿಯೊಡನೆ ಜೀವನ ಮಾಡುವಾಗ, ಅವಳ ತಲೆಯನ್ನು ತಾನು ಬಾಚಬೇಕು, ತಲೆತುಂಬ ಹೂದಂಡೆ ಮುಡಿಸಬೇಕು—ಮಾರುದ್ದ ಜಡೆ ಹೆಣೆಯಬೇಕು, ಆ ಹೆಳಲಿಗೆ 'ರಿಬ್ಬನ್' ಕಟ್ಟಬೇಕು,........ತಮ್ಮನಿಗೆ ದೊಡ್ಡ ನೌಕರಿ ಸಿಕ್ಕಬೇಕು........ಕೈತುಂಬ ಸಂಬಳ ತರುವಂತಾಗಬೇಕು ........ಅಹ! ಎಂತಹ ನಿಸ್ವಾರ್ಥದಾಸೆ! ವತ್ಸಲೆಯಂತಹ ಅಕ್ಕ ಅವಳೇ ವಿನಾ ಬೇರಾರೂ ಇರಲಾರರು. ಇಂತಹ ಅಕ್ಕ–ತಮ್ಮ ಇರುವುದು ಅಪರೂಪ. ತಂದೆ ತಾಯಿಗೆ ಪೂರ್ವಜನ್ಮದ ಸುಕೃತಬೇಕು ಇಂತಹ ಆದರ್ಶ ಮಕ್ಕಳನ್ನು ಪಡೆಯಲಿಕ್ಕೆ?

ಏಕನಾಥನೇ ಸ್ವತಃ ತಾನು ಪರೀಕ್ಷೆಯಲ್ಲಿ ಮೊದಲನೆಯವನಾಗಿ ತೇರ್ಗಡೆ ಹೊಂದಿದ ವಿಷಯಕ್ಕೆ 'ವೈರ್' ಮಾಡಿದ್ದನು. ವತ್ಸಲೆಗೆ ಎಲ್ಲರಿಗಿಂತ ಹೆಚ್ಚು ಆನಂದವಾಯಿತು. ತಮ್ಮನು ರಜೆಯಲ್ಲಿ ಮನೆಗೆ ಬರುವನೆಂದು ವತ್ಸಲೆಗೆ ಸಡಗರವೇ ಸಡಗರ, ಹಾಗೆ ಹೀಗೆ ದಿನಗಳು ಕಳೆದವು. ಏಕನಾಥನು ಮನೆಗೆ ಬಂದನು. ಯಾವ ವೈಭವದ ಶಿಖರವನ್ನೇರಿದರೂ, ಹುಟ್ಟೂರು, ಮನೆ–ಗಳನ್ನು ಮರೆಯುವುದು ಶಕ್ಯವೇ? ಮನೆಗೆ ಬಂದ ಏಕನಾಥನಿಗೆ ದಿನಾಲೂ ಅಕ್ಕನೊಡನೆ ಬಾಯಿತುಂಬ ಮಾತು, ಅವಳೇ ಅವನ ಆಲೋಚನೆಗೆ! ಅಕ್ಕನುಮಾಡಿದ ತಿಂಡಿ, ಕಾಫಿ, ಬೋಂಡಾ, ಕರಿಗಡುಬು........ಏಕನಾಥನಿಗೆಷ್ಟುತಿಂದರೂ ಸಾಲದು! ಅವಳು ಎಷ್ಟು ಮಾತಾಡಿದರೂ ಸಾಲದು? ಅವಳ ಸ್ಥಿತಿಯನ್ನು ನೋಡಿ ಮಲಮಲ ಮರುಗಿದನು. ಆತನು, 'ಅಕ್ಕಾ, ಹೆದರಬೇಡ. ನನಗೆ ದೊಡ್ಡ ಕೆಲಸವಾದರೆ ನಿನಗೇನೂ ಕಡಿಮೆಮಾಡುವುದಿಲ್ಲ,' ಎಂದು ಹೇಳುವಾಗ ಆತನ ಅಂತಃಕರಣ ಉಕ್ಕಿ ಬಂತು. ಮುಂದಿನ ವಿದ್ಯಾಭ್ಯಾಸಕ್ಕೆ ಪುಣೆಗೆ ಫರ್ಗು

ಸನ್ ಕಾಲೇಜಿನಲ್ಲಿ ಕಲಿಯಲು ಹೋಗುವವನು ಏಕನಾಥನು! ಆದರೆ ಹೋಗುವೆನೆಂದರೆ ಕಾಲೇಬರದು. ಬಡತನವಾದರೂ ಬಾಯಿಯ ರುಚಿಗೇನು ಬಡತನವೇ? ತಾಯಿ, ತಂದೆ, ಅಕ್ಕ–ಇವರ ವಾತ್ಸಲ್ಯಕ್ಕೇನು ಬಡತನವೇ? ಅಕ್ಕ ತಯಾರುಮಾಡಿದಷ್ಟು ರುಚಿಕರವಾದ ತಿಂಡಿತಿನಿಸು ಇನ್ನೆಲ್ಲಿಸಿಗುವುದು? ಹೃದಯಾಂತರಾಳದಿಂದ ಬಂದ ವಾತ್ಸಲ್ಯದ ಕರೆ! ಏಕನಾಥ, ಕಾಫಿಕುಡಿ! ತಣ್ಣೀರುಸ್ನಾನಮಾಡಬೇಡ! ಒದ್ದೆ ಬಟ್ಟೆ ಒಣಗಲು ಹಾಕು! ಕತ್ತಲೆಯಲ್ಲಿ ತಿರುಗಬೇಡ! ನಿದ್ದೆಗೆಡಬೇಡ............ ಇಂತಹ ಮಾತುಗಳು ಆ ಹೆತ್ತ ಒಡಲಿನಿಂದ ಹೊರಕ್ಕೆ ಹೊಮ್ಮಿದಂತೆ ಇನ್ನಾರ ಬಾಯಿಂದ ಹೊರಬೀಳುವುವು? ಏಕನಾಥನಿಗೆ ಕಪ್ಪು ಬಣ್ಣದ ಹುಡುಗಿ ಬೇಡವಂತೆ! 'ಬಿಳಿಯ ಮತ್ತು ವಿದ್ಯಾವತಿ ಹುಡುಗಿ ಹೆಂಡತಿಯಾಗಬೇಕಂತೆ'–ಎಂದು ಹಾಸ್ಯಮಾಡುವ ಅಕ್ಕ ಅಷ್ಟು ದೂರದಲ್ಲೆಲ್ಲಿ ಕಾಣಸಿಗುತ್ತಾಳೆ? ಇಂತಹ ನೈಜಪ್ರೇಮವನ್ನು ಪುಣೆಯಂತಹ ಶಹರಿನಲ್ಲಿ ರೊಕ್ಕ ಕೊಟ್ಟು ಪಡೆಯಲು ಸಾಧ್ಯವೇ? ಅವನಿಗೆ ತಾಯಿ, ತಂದೆ, ಅಕ್ಕ ಮೊದಲಾದವರನ್ನು ಬಿಟ್ಟು ಅಷ್ಟುದೂರ ಹೋಗಲಿಕ್ಕೆ ಮನಸ್ಸು ಸರ್ವಥಾ ಒಪ್ಪಲಿಲ್ಲ. ಹಾಗೆಂದು ಹೋಗದ ಇರುವುದು ಸಾಧ್ಯವೇ? ಹೆಣ್ಣಿಗೆ ಗಂಡ ಭೂಷಣ, ಗಂಡಿಗೆ ವಿದ್ಯೆಯೇ ಭೂಷಣವಲ್ಲವೇ? ಅವನು ಪುಣೆಗೆ ಸುವರ್ಣಪುರದ ದಾರಿಯಿಂದಲೇ ಹೋಗಬೇಕೆಂದು ನಿರ್ಧರಿಸಿದನು. ಹಾಗೆ ಹೋಗುವುದು ಅನಿವಾರ್ಯವೂ ಆಗಿತ್ತು. ಶಂಕರರಾಯರ ಧನಸಹಾಯ ಬೇಕೇ ಬೇಕಷ್ಟೆ! ಹಾಗೆ ಅವನು ಪುಣೆಗೆ ಹೊರಡುವ ದಿನ ಅಕ್ಕನಿಗೆ ಕಣ್ಣಿನಿಂದ ನೀರು ಧಾರೆಧಾರೆಯಾಗಿ ಹರಿಯಿತು. ತಮ್ಮನೆಷ್ಟು ವಿದ್ಯಾವಂತನಾಗಿ ಬರುವನೋ............ಪರಸ್ಥಳ! ಎಷ್ಟುಕಷ್ಟಪಡಬೇಕೋ............ಇವೇ ಯೋಚನೆಗಳು ವತ್ಸಲೆಗೆ! ರಜೆಯ ಕಾಲದಲ್ಲಿ ಅವನು ಬಿಂದುಪುರದಲ್ಲಿದ್ದಷ್ಟು ದಿನವೂ ದಿನಬೆಳಗಾದರೆ ಸ್ನೇಹಿತರ–ಕೆಳದಿಯರ ಪತ್ರಗಳು ಏಕನಾಥನ ಕೈ ಸೇರುತ್ತಿದ್ದವು. ತಾರಾನಾಥನು, 'ನೀನು ಆರ್ಟ್ಸ್ ತೆಗೆದುಕೊಳ್ಳುತ್ತೀಯೋ ಸೈನ್ಸ್‌ಗೆ ಓದುತ್ತೀಯೋ, ತಿಳಿಸು ಎಂದು ಬರೆಯುವನು. ಯಮುನೆ ನಮ್ಮ ಕಕ್ಕನ ಮನೆ ಪುಣೆಯಲ್ಲಿದೆ. ಬೇಕಾದರೆ ಉಳಿಯಲಿಕ್ಕೆ ವ್ಯವಸ್ಥೆಮಾಡುತ್ತೇನೆ, ತಿಳಿಸುವಿರಾ?

ಎಂದು ಬರೆಯುವಳು. ವಿಜಯಲಕ್ಷ್ಮಿ, 'ಮೊದಲನೆಯ ವರ್ಗದಲ್ಲಿ ತೇರ್ಗಡೆ ಹೊಂದಿದ ನಿಮಗೊಂದು ಬಹುಮಾನ ಕೊಡಬೇಕೆಂದಿದ್ದೇನೆ. ಶ್ರೀ|| ನೆಹರುರವರ, ' ಡಿಸ್ಕವರಿ ಆಫ್ ಇಂಡಿಯ ' ಕಳಿಸಿದರೆ, ಸ್ವೀಕರಿಸುವಿರಾ ? ಎಂದು ಬರೆಯುವಳು. ಅನಸೂಯ ನಿಜವಾಗಿಯೂ ಪುಣ್ಯಾತ್ಮೆ! ಅದೃಷ್ಟಶಾಲಿನಿ! ಅವಳು ಹಡೆದದ್ದು ರತ್ನಗಳೇ! ಆದರೆ ಹಾಯ್! ಒಂದು ರತ್ನ–ವತ್ಸಲಾ, ಯಶವಂತನಂತಹ ಹಂದಿಯಿಂದ ಬೆಲೆಗಾಣಲಾಗಲಿಲ್ಲ ಹಂದಿಯೆದುರಿಗೆ ರತ್ನವನ್ನು ಚೆಲ್ಲಿದರೆ ಅದಕ್ಕೇನು ತಿಳಿದೀತು? ಇನ್ನೊಂದು ರತ್ನ–ಏಕನಾಥ,–ಇವನ ಬೆಲೆಯನ್ನೂ ಎಲ್ಲರೂ ಅರಿಯುವಂತಾಯಿತು. ಸುವರ್ಣಪುರದ ಶಂಕರರಾಯರಿಗಂತೂ ಅವರ ಮಗಳ ಮದುವೆಯದೊಂದೇ ಯೋಚನೆ. ಏಕನಾಥನು ಮೊದಲನೆಯವನಾಗಿ ತೇರ್ಗಡೆಯಾದ ಮೇಲಂತೂ ಆ ಯೋಚನೆ ಚುರುಕಾಯಿತು. ಕಾಲೇಜಿನ ವಿದ್ಯಾಭ್ಯಾಸದ ಪ್ರೇರಕರೂ ಪ್ರೋತ್ಸಾಹಕರೂ ಅವರೇ ಎಂದು ಬೇರೆ ಹೇಳಬೇಕಾಗಿಲ್ಲ. ನಳಿನಿ ಫೋರ್ತ್‌ಫಾರ್ಮ್ ತರಗತಿಯಲ್ಲಿ ಓದುತ್ತಿದ್ದಳು. ಏಕನಾಥನಲ್ಲಿ ಅವಳಿಗೆ ಯಾವುದೂ ತರದ ಸಂಕೋಚವಿಲ್ಲದೆ, ಬಹಳ ಸಲುಗೆಯಿದ್ದಿತ್ತು. ಮನೆಯಲ್ಲಿ ಅವನಿಂದ ' ಟ್ಯೂಶನ್ ' ಹೇಳಿಸಿಕೊಳ್ಳುತ್ತಿದ್ದಳು. ಗಣಿತವೆಂದರೆ ನಳಿನಿಗೆ ತಲೆಸಿಡಿತ ಬರುತ್ತಿತ್ತು. ಏಕನಾಥನು ಅಷ್ಟು ಕಠಿಣವೆಂದು ಅವಳು ತಿಳಿದ ಗಣಿತವನ್ನು ಲೀಲಾಜಾಲವಾಗಿ ಅವಳಿಗೆ ತಿಳಿಯುವಂತೆ ಮಾಡಿದನು. ದಿನ ನಿತ್ಯದ ಸಲುಗೆಯಿಂದ ಅವಳಿಗೂ ಏಕನಾಥನೇ ಗಂಡನಾಗುವುದು ಒಳಿತೆಂದೆನಿಸಿತು. ಶಂಕರರಾಯರು ಅದೇ ವರ್ಷ ಮಗಳಿಗೆ ಮದುವೆ ಮಾಡಬೇಕೆಂಬ ಪ್ರಸ್ತಾಪವನ್ನು ಏಕನಾಥನೆದುರಿಗೆ ತೆಗೆದರು. ಕಾಲೇಜಿಗೆ ಹೋಗಿ ಬೇಸಿಗೆಯ ರಜೆಯಲ್ಲಿ ಬಂದಾಗ ಮಾಡಿಕೊಳ್ಳಲು ಸಿದ್ಧನಿರುವೆನೆಂದು ಆಗಿನ ಮುಹೂರ್ತವನ್ನು ಮುಂದಕ್ಕೆ ತಳ್ಳಿದನು.

ತಾಯಿತಂದೆಯರ ಆಶೀರ್ವಾದವನ್ನು ಪಡೆದು ಅಕ್ಕ ಮೊದಲಾದ ಹಿರಿಯರೆಲ್ಲರಿಗೂ ನಮಸ್ಕಾರಮಾಡಿ, ಏಕನಾಥನು ಪುಣೆಗೆ ಹೊರಟನು. ಮೊದಲಿನ ಸಲ ಪುಣೆಗೆ ಹೋಗಿ ವಸತಿ ಸೌಕರ್ಯಗಳೆಲ್ಲಾ ಅನುಕೂಲಿಸಿದ ಮೇಲೆ ಅಕ್ಕ ವತ್ಸಲೆಯನ್ನು ಪುಣೆಗೆ ಕರೆಯಿಸಿಕೊಳ್ಳುವುದಾಗಿ ಹೇಳಿದನು.

ಪುಣೆಗೆ ಹೋಗಿ ಕಾಲೇಜಿಗೆ ಸೇರಿ, ಟರ್ಮ್ಸ್ ತುಂಬಿ, ಹೆಸರನ್ನು ಹಚ್ಚಿಸಿದನು. ಒಂದೇ ಹೈಸ್ಕೂಲಿನಲ್ಲಿ ಒಟ್ಟಿಗೆ ಕಲಿತ ಇವನ ಸಹಪಾಠಿಗಳೂ ಅದೇ ಕಾಲೇಜಿಗೆ ಸೇರಿದರು. ಅವರು ಇವನ ಪರಿಚಯುವನ್ನು ಅಲ್ಲಿಯ ಮಹಾರಾಷ್ಟ್ರದ ವಿದ್ಯಾರ್ಥಿಗಳಿಗೆ ಮಾಡಿಕೊಡುವುದರಲ್ಲಿ ಬಹಳ ಶ್ರಮಿಸಿದರು. ಎಸ್. ಎಸ್. ಎಲ್. ಸೀ. ಪರೀಕ್ಷೆಯಲ್ಲಿ ಗೌರವ! ಇಡೀ ಕರ್ಣಾಟಕಕ್ಕೇ ಕೀರ್ತಿ ತಂದಿರುವನೆಂದು ಮಿತ್ರರು ' ರೇಡಿಯೋ ಬ್ರಾಡ್‌ಕ್ಯಾಸ್ಟ್' ನಂತೆ ಸಾರಿದರು. ರಾಣೆ, ದೇಶಪಾಂಡೆ, ಚೌಗಲೆ, ಶಿಂಧೆ ಮೊದಲಾದ ಅಲ್ಲಿಯ ಕಾಲೇಜಿನ ಇತರ ಯುವಕರೂ ಏಕನಾಥನ ಮಿತ್ರತ್ವವನ್ನು ಸಂಪಾದಿಸಿದರು. ಯಾವಾಗ ನೋಡಿದರೂ ಏಕನಾಥನಿಗೆ—ಪಿಕ್‌ನಿಕ್, ಗಾರ್ಡನ್‌ಪಾರ್ಟಿ, ಸೆಂಡ್ ಆಫ್ ಮಿಟಿಂಗ್, ಲಿಟರರಿ ಕಾನ್ಫರೆನ್ಸ್, ಕಾಲೇಜ್ ಯೂನಿಯನ್ ಮುಂತಾದ ಎಷ್ಟೋ ಕಾರ್ಯಕ್ರಮಗಳು ಸದಾ ಕಾದಿರುತ್ತಿದ್ದವು ಎಲ್ಲವುಗಳಲ್ಲೂ ಏಕನಾಥನದೇ ಮೇಲುಗೈ. ಒಂದಕ್ಕೆ ಅವನು ಗೌರವಕಾರ್ಯದರ್ಶಿ, ಇನ್ನೊಂದಕ್ಕೆ ಎಕ್ಸ್‌ಟ್ರಾ ಆರ್ಡಿನರಿ ಮೆಂಬರ್, ಇನ್ನೊಂದಕ್ಕೆ ಅಧ್ಯಕ್ಷ, ಮತ್ತೊಂದಕ್ಕೆ ಸ್ಪೀಕರ್........ಹೀಗೆ ಅವನ ಕಾರ್ಯಕ್ರಮಗಳು ಬಹುಮುಖವಾಗಿ ಬೆಳೆಯತೊಡಗಿದವು. ಇವನ ಕಾರ್ಯಕ್ರಮಗಳೆಂದರೆ ಎಲ್ಲರಿಗೂ ಹಿಗ್ಗು! ಆ ಮರಾಠಾ ಜನರಿಗೆ ಕರ್ಣಾಟಕದ ಜನರೆಂದರೂ ಪ್ರಾಣ! ಕನ್ನಡಿಗರು ತಮಗೆ ' ಚಳ್ಳೇಕಾಯಿ' ತಿನ್ನಿಸುವಷ್ಟು ಬುದ್ಧಿವಂತರೆಂದು ಅವರಿಗೆ ಗೊತ್ತು! ಒಂದುದಿನ ಕಾಲೇಜಿನಲ್ಲಿ ' ಕಾಲೇಜ್ ಯೂನಿಯನ್ ಡೇ'—ಸಮಾರಂಭವಿದ್ದಿತ್ತು. ಅಂದು ಕಾಲೇಜಿನ ಪ್ರಿನ್ಸಿಪಾಲ ಡಾ॥ ಪಟವರ್ಧನ್, ಎಂ.ಎ., ಡಿ. ಲಿಟ್ ಅಧ್ಯಕ್ಷರಾಗಿದ್ದರು. ಆದಿನ ಚರ್ಚೆಗಿಟ್ಟ ವಿಷಯ: ಮಹಾತ್ಮಾ ಗಾಂಧಿಯವರ ತತ್ವಗಳಿಗನುಸರಿಸಿ ಪೋಲೀಸ್ ಪಡೆಯನ್ನು ಅಹಿಂಸಾತ್ಮಕವಾದ ಸೈನ್ಯವನ್ನು ಮಾರ್ಪಡಿಸುವುದು ಅಗತ್ಯವೇ ಅನಗತ್ಯವೇ? (That our police force should be turned into a non-violent army on Mahatma Gandhi's principle). ಈ ವಿಷಯ ಕುರಿತು ಅನೇಕರು ಮಾತನಾಡಬೇಕಿದ್ದಿತ್ತು. ಮಹಾರಾಷ್ಟ್ರದವರಿಗೆ ತಾವು ಮೊದಲಿನಿಂದ ದೊಡ್ಡ ಸಾಮ್ರಾಜ್ಯ ಕಟ್ಟಿ ಆಳಿದವರೆಂಬ ಗರ್ವ ತಲೆಗೆ ಅಡರಿ ಹೋಗಿತ್ತು ಮಾತೆತ್ತಿ

ದರೆ ಅವರ ನಾಲಿಗೆಯ ತುದಿಯಲ್ಲಿ 'ಶಿವಾಜಿ' ಕುಣಿಯುತ್ತಿದ್ದನು. ಶಿವಾಜಿಯ ಗಡ್ಡವೇ ಅವರ ಗಡ್ಡ, ಕೈ ಉಗುರು ಉದ್ದುದ್ದ ಬೆಳೆಯಿಸಿ ಕೊಂಡರೂ ಅದು ಶಿವಾಜಿಯ 'ವ್ಯಾಘ್ರನಖ'. ಸಾಮ್ರಾಜ್ಯನಾಶವಾದರೂ ಗರ್ವಮಾತ್ರ ಅಳಿಯದೆ ಪುನಃ ಬ್ಯಾರಿಸ್ಟರ್ ಸಾವರ್ಕರ್........ಭೋಪಟ್ ಕರ್ ಮೊದಲಾದ ಹಿಂದೂ ಮಹಾಸಭೆಯ ಧುರೀಣರ ಆಶ್ರಯದಲ್ಲಿ ಅದು ಗಗನಕ್ಕೇರಿತ್ತು ಗರ್ವ ಆರ್. ಎಸ್. ಎಸ್. ರೂಪತಾಳಿ 'ಗೋಡ್ಸೆ' ಎಂಬ ರಾಕ್ಷಸನನ್ನು ಹಡೆಯಿತು ಆತನು ಜಗದ್ವಿಖ್ಯಾತನಾದ ಮಹಾತ್ಮ-ಮಹಾ ಕರುಣಾಶಾಲಿಯಾದ 'ಗಾಂಧಿ'ಯ ಕೊಲೆಗೆ ಮಾತ್ರ ಕಾರಣ ನಾದನೇ ವಿನಾ ಅವನ ಜನ್ಮ ಇನ್ನಾವರೀತಿಯಲ್ಲೂ ಸಫಲವಾಗಲಿಲ್ಲ. ಈತನನ್ನು ಈ ನರಲೋಕಕ್ಕೆ ಕಳಿಸಿದ ಬ್ರಹ್ಮನು ಎಂತಹ ಅವಿವೇಕಿಯೆಂದು ಸಣ್ಣ ಮಕ್ಕಳೂ ಕೂಡ ಹಳಿಯ ಬಹುದಲ್ಲವೇ? ಹಾಗಿರುವ ಸದ್ಯದ ಪರಿಸ್ಥಿತಿಯಲ್ಲಿ ಚರ್ಚೆಗಿಟ್ಟ ವಿಷಯದಲ್ಲಿ, ಪೋಲೀಸ್ ಪಡೆಯನ್ನು ಹಿಂಸಾತ್ಮಕ ರೂಪವಾಗಿಯೇ ಸಂಘಟಿಸಬೇಕೆಂದು ಅನೇಕರು ಮಾತಿನ ತೋಫನ್ನು ಹಾರಿಸಿದರು. ನಂತರ ಏಕನಾಥನ ಸರದಿ ಬಂತು. ಆತನು ಗಾಂಧಿಯವರ ಮಹಿಮೆ, ವ್ಯಕ್ತಿತ್ವ, ನಮ್ಮಂತಹ ಮಣ್ಣಿನ ಮುದ್ದೆಗಳನ್ನು ಹೇಗೆ ಮೂರ್ತಿಗಳನ್ನಾಗಿಮಾಡಿದರು ಮೊದಲಾದುವನ್ನು ಕುರಿತು ಒಂದೆರಡು ತಾಸುಗಳವರೆಗೆ ಅಮೋಘವಾಗಿ ಭಾಷಣಮಾಡಿದನು. He died that Muslims should live ಎಂದು ಬಹು ಸ್ವಾರಸ್ಯವಾಗಿ ಹಿಂದೂ ಮುಸಲ್ಮಾನರ ಮೈತ್ರಿಯನ್ನು ಮತ್ತು ಅವರ ಸ್ವರೂಪವನ್ನು ವರ್ಣಿಸಿದನು. ಗಾಂಧಿಯವರಿಗೆ ಸತ್ಯ-ಶಾಂತಿ-ಅಹಿಂಸೆಗಳಲ್ಲಿ ಶ್ರದ್ಧೆ, ಅತ್ಯಂತ ಆಸಕ್ತಿ ಎಷ್ಟರ ಮಟ್ಟಿಗಿದೆಯೆಂದು ಮನಗಾಣಿಸಿ, Nothing could have more eloquently demonstrated Gandhiji's inspiring humanism, and his abiding love for the Muslims than his recent 'Peace Missi n', first in Calcutta and than in Delhi '........ಮುಂತಾದವುಗಳನ್ನು ಉದಾಹರಿಸಿ, ಸಭಿಕರಿಗೆ ಅತ್ಯಾನಂದವನ್ನುಂಟುಮಾಡಿದನು. ಹೀಗೆ ನೂತನಾಡಿ ವಿರೋಧವಾಗಿ ಮಾತನಾಡಿದ ಎಲ್ಲರನ್ನೂ ಖಂಡಿಸಿದನು. ಇವನ ಪರವಾಗಿ ಶಾಂತಾ ದೇಶಪಾಂಡೆ, ಮನೋರಮಾ ವಾ ಘ್,

ಪ್ರಮಿಳಾರೀಗೆ, ವತ್ಸಲಾ ಆಪ್ಟೆ ಮೊದಲಾದ ಮಹಿಳಾ ವಿದ್ಯಾರ್ಥಿಗಳು ಮಾತನಾಡಿ ಏಕನಾಥನ ಭಾಷಣಕ್ಕೆ ಮೆರುಗನ್ನು ಕೊಟ್ಟರು. ಸಾಧಾರಣ ಐದು–ಹತ್ತು ನಿಮಿಷದವರೆಗೆ ಸಭೆಯಲ್ಲಿ ಕರತಾಡನಗಳಾದವು. ಪ್ರಿನ್ಸಿಪಾಲ ಪಟವರ್ಧನರು—ಅಧ್ಯಕ್ಷ ಭಾಷಣದಲ್ಲಿ ಏಕನಾಥನ ಮಾತನ್ನೇ ಪುಷ್ಟೀಕರಿಸಿ, ಸಮಾರೋಪ ಭಾಷಣಮಾಡಿ, ಗಾಂಧಿಯ ತತ್ವಗಳ ಕಡೆಗೆ ಹೊರಳಿ, ನಮ್ಮ ಮುನ್ನಡೆ ಅಭ್ಯುದಯ ; ಅಹಿಂಸೆಯಲ್ಲಿಯ ಶಕ್ತಿ–ಮೊದಲಾದುವುಗಳನ್ನು ಬಣ್ಣಿಸಿ, ಪೋಲೀಸ್ ಪಡೆಯನ್ನು ಅಹಿಂಸೆಯ ತಳಹದಿಯ ಮೇಲೆ ಶಾಂತಿ ರಕ್ಷಕ ದಳವನ್ನಾಗಿ ಮಾರ್ಪಡಿಸಬೇಕೆಂದೂ, ಹಾಗೆ ಸಂಘಟಿಸಬೇಕೆಂದೂ ಸಮರ್ಥಿಸಿದರು. ಅಧ್ಯಕ್ಷರೂ ಕೂಡ ವಿಚಾರಪ್ಲುತ ಭಾಷಣಮಾಡಿದ ಮೂಲಕಾರಣ ಏಕನಾಥನ ವಿಚಾರವಾಹಿನಿ............ ಅಪಾರ ಪಾಂಡಿತ್ಯದ ಮಾತುಗಳ ಪ್ರಭಾವದಿಂದ! ಏಕನಾಥನ ಹೆಸರು ಅಂದಿನಿಂದ ಎಲ್ಲರ ಬಾಯಿಯಲ್ಲೂ ಬರುವಂತಾಯಿತು. ಮಹಿಳಾ ವಿದ್ಯಾರ್ಥಿಗಳಲ್ಲೊಬ್ಬಳಾದ ಮಿಸ್. ಪ್ರೇಮಲತಾ ಅಪ್ಟೇಕರ್—ಎಂಬವಳಿಗಂತೂ ಆದ ಆನಂದವನ್ನು ವರ್ಣಿಸಲಸಾಧ್ಯ! ಇತರ ಪ್ರೊಫೆಸರ್ಸ್ ನಿಂದ ಆರಂಭವಾಗಿ ಎಲ್ಲಾ ಲೇಡಿ ಸ್ಟೂಡೆಂಟ್ಸ್‌ವರೆಗೆ ಏಕನಾಥನ ನಾಮಾವಳಿ! ಸರಿ! ಅಂದಿನಿಂದ ಕಾಲೇಜಿನ ಎಲ್ಲಾ ವಿದ್ಯಾರ್ಥಿಗಳ ದೃಷ್ಟಿಯಲ್ಲಿ ಅವನೊಬ್ಬ ಟಿ. ಬಿ. ಮೆಕಾಲೆಯೋ ಎಡ್ಮಂಡ್ ಬರ್ಕ್‌ನೋ ಆದನು—ಆರೇಟರ್ ಅಲ್ಲವೇ? ಅಂದಿನಿಂದ ಎಲ್ಲೆಲ್ಲಿ ಉಪನ್ಯಾಸಗಳೋ ಅಲ್ಲಲ್ಲಿ ಅವನ ಸ್ನೇಹಿತರು ಕರೆದುಕೊಂಡು ಹೋಗಿ ಅವನ ಪ್ರೋಗ್ರಾಂ ಇಡಿಸುತ್ತಿದ್ದರು. ಈತನಿಗೆ ವಿರಾಮವೇ ಇರದು. ಅದೃಷ್ಟವಶಾತ್ ಪುಸ್ತಕ ಹಿಡಿಯದಿದ್ದರೂ ಇಡೀ ವಿಶ್ವ ವಿದ್ಯಾಲಯದಲ್ಲೇ ಏಕನಾಥನು ಬಿ.ಎ., ಪರೀಕ್ಷೆಯಲ್ಲಿ ಡಿಸ್ಟಿಂಕ್ಷನ್ ಪಡೆದು ಮೊದಲನೆಯವನಾಗಿ ತೇರ್ಗಡೆ ಹೊಂದಿದನು. ಅಂದಿನಿಂದ ಅವನು 'ಫೆಲೋ ಆಫ್ ಫರ್ಗ್ಯುಸನ್ ಕಾಲೇಜ್' ಆಗಿ ಪರಿಗಣಿಸಲ್ಪಟ್ಟನು. ಇಷ್ಟರಲ್ಲೇ ತನ್ನ ಕೃತಿಗಳಾದ 'ಕತ್ತಲೆಯಿಂದ ಬೆಳಕಿಗೆ', 'ಬಿಡುಗಡೆ', 'ನವಮಲ್ಲಿಕಾ ಮಾಲೆ', 'ಹಣ್ಣಿನ ಬುಟ್ಟಿ'—ಕನ್ನಡದಲ್ಲಿ ಬರೆದವುಗಳೆನಿಸಿ ಕನ್ನಡ ನಾಡಿನಲ್ಲಿ ಎಲ್ಲರಿಗೂ ಚಿರಪರಿಚಿತನಾಗಿದ್ದನು. ದಿನ ಬೆಳಗಾದರೆ ಪ್ರಸಿದ್ಧ ಮಾಸಪತ್ರಿಕೆಗಳ ಸಂಪಾದಕ ಮಹಾಶಯರ ಪತ್ರಗಳ ಸುರಿಮಳೆ!

ಲೇಖನಗಳನ್ನು ಯಾವಾಗ ಬರೆಯಲಿ? ಯಾವ ಪತ್ರಿಕೆಗೆ ಕಳಿಸಲಿ?— ಇದೇ ಏಕನಾಥನಿಗೊಂದು ದೊಡ್ಡ ಸಮಸ್ಯೆಯಾಗಿಬಿಟ್ಟಿತು............ ಏಕನಾಥನ ವೈಭವವೇ ವೈಭವ!

ಅತ್ತ ಬಿಂದುಪುರದಲ್ಲಿ ಅಕ್ಕ ವತ್ಸಲೆಗೆ ಊಟಕ್ಕೆ ಇದ್ದರೆ ಉಡಲು ಸೀರೆ ಇಲ್ಲ, ಸೀರೆ ಇದ್ದರೆ ತೊಡಲು ಕುಪ್ಪಸವಿಲ್ಲ........ಇಂತಹ ದುರ್ದಿನವನ್ನು ನೂಕುತ್ತಿದ್ದಳು. ತಮ್ಮನು ಅಕ್ಕನಿಗೆ ಆಗಾಗ ಹತ್ತೋ ಹದಿನೈದೋ ರೂಪಾಯಿಗಳನ್ನು ಕಳಿಸುವನು. ತಾನು ಬರೆದು ಅಚ್ಚಾದ ಕತೆ-ಕಾದಂಬರಿ, ಕವನಗಳನ್ನು ಓದಲು ಕಳಿಸುವನು. ಅವುಗಳನ್ನೆಲ್ಲಾ ಓದಿ ವತ್ಸಲೆಯ ಜೀವನ ಸಂಸ್ಕಾರವೇ ಬದಲಾಯಿಸಿಹೋಗಿತ್ತು. ತಾನೂ ಓದಿದ್ದರೆ ... ... ತಾನೂ ಗಂಡಾಗಿ ಹುಟ್ಟಿದ್ದರೆ........! ಹೆಣ್ಣಾಗಿ ಹುಟ್ಟಿ ಎಷ್ಟು ಕಷ್ಟಪಟ್ಟೆ! ........ಎಂದು ದುಃಖಪಡುವಳು. ಇನ್ನೊಂದು ಕ್ಷಣದಲ್ಲಿ ಇಂತಹ ತಮ್ಮನನ್ನು ಪಡೆದ ತಾನೇ ಧನ್ಯೆಯೆಂದು ಭಾವಿಸುವಳು. ಸುವರ್ಣಪುರದ ಶಂಕರರಾಯರು ಇಷ್ಟರೊಳಗಾಗಿ ಕೃಷ್ಣಮೂರ್ತಿರಾಯರಿರುವಲ್ಲಿಗೆ ಹತ್ತಾರು ಸಲ ಬಂದಿದ್ದರು. ಅವರು ದೊಡ್ಡ ವಕೀಲರು. ಈ ಬಡ ಕೃಷ್ಣಮೂರ್ತಿರಾಯರ ಮನೆಗೆ ಕಾಲಿಟ್ಟರು. ಏಕೆ? ಏಕನಾಥನನ್ನು ಅಳಿಯನನ್ನಾಗಿ ಮಾಡಿಕೊಳ್ಳಲಿಕ್ಕೆ! ಈಗಂತೂ ಹುಡುಗಿಗೆ ಹದಿನೆಂಟೋ ಹತ್ತೊಂಬತ್ತೋ ವರ್ಷ! ಹೇಗೆ ಎಷ್ಟುಕಾಲವೆಂದು ಸುಮ್ಮನಿರುವುದು? ಈ ವಿಷಯದಲ್ಲಿ ತಮ್ಮ ಸ್ವಂತ ಅಭಿಪ್ರಾಯವನ್ನು ಏಕನಾಥನಿಗೆ ಆಗಾಗ್ಗೆ ಪತ್ರಮುಖೇನ ತಿಳಿಸಿರಲಿಲ್ಲವೆನ್ನುವಂತಿಲ್ಲ. ಕೃಷ್ಣಮೂರ್ತಿರಾಯರನ್ನು ಈ ಬಗ್ಯೆ ಪ್ರೇರೇಪಿಸಿ ಮಗನನ್ನು ಅವರು ಒತ್ತಾಯಗೊಳಿಸುವುದು. ಶಂಕರರಾಯರ ಮೂಲ ಉದ್ದೇಶ. ಒಂದು ವೇಳೆ ತನ್ನ ಮಗಳನ್ನು ಮದುವೆಯಾದರೆ ಮಾತ್ರ ಕಾಲೇಜಿನಲ್ಲಿ ಕಲಿಯಲು ಸಹಾಯ ಮಾಡುವೆನೆಂದು ಅವರು ಹೇಳುವುದು ಸುಲಭವಿದ್ದಿತ್ತು. ಆಗ ಹಾಗೆ ಹೊಳೆಯಲಿಲ್ಲವೋ ಏನೋ! ಈಗ ಹಾಗೆಮಾಡಿದರೆ ಏಕನಾಥನು ಸಗ್ಗುವನಲ್ಲವೆಂದು ಅವರಿಗೆ ಗೊತ್ತು. ಕೃಷ್ಣಮೂರ್ತಿರಾಯರು ಬಡವರು ನಿಜ. ಆದರೆ ಅವರ ಗುಣ, ಅವರ ಮಗನ ವಿದ್ಯಾಪ್ರಭಾವ ಶಂಕರರಾಯರನ್ನು ಅವರ ಮನೆಗೆ ಸ್ವಾಗತಿಸಿತು. ಒಬ್ಬರ ಅಗತ್ಯ-ಅನಗತ್ಯಗಳನ್ನು ಇನ್ನೊಬ್ಬರು

ತಿಳಿದಾಗಲೇ ಸಮತಃಭಾವನೆ! ಶ್ರೀಮಂತ–ಬಡವ; ಮೇಲು ಜಾತಿ–ಕೀಳುಜಾತಿ; ಪಂಡಿತ–ಪಾಮರ; ಇಂತಹ ದ್ವಂದ್ವಗಳಿಲ್ಲದಾಗಲೇ ಸಮತೆ! ಕಾಲವು ಈ ಗುಟ್ಟನ್ನು ನಾವರಿಯದಿದ್ದರೂ ಆ ಶಕ್ತಿಯ ಪ್ರವಾಹದಲ್ಲಿ ನಮ್ಮನ್ನು ಕೊಚ್ಚಿಕೊಂಡು ಹೋಗಿಯೇ ತೀರುವುದು. ಶಂಕರರಾಯರ ಮಾತಿಗೆ ಓಗುಟ್ಟ, ಕೃಷ್ಣಮೂರ್ತಿರಾಯರು ಕೂಡಲೇ ಮಗನಿಗೆ ಪತ್ರ ಬರೆಸರು. ಮಗನು, 'ಶಂಕರರಾಯರೇನೂ ನಿರಾಸೆಪಡುವ ಕಾರಣವಿಲ್ಲ. ನಳಿನಿಗೆ ನನ್ನ ಹೃದಯದಲ್ಲಿ ಸ್ಥಾನವನ್ನು ಕೊಟ್ಟಿರುತ್ತೇನೆ. ಆದರೆ ಸದ್ಯಕ್ಕೆ ಎಂ.ಎ. ಪರೀಕ್ಷೆ ಸಮೀಪಿಸಿದೆ. ಇದರ ನಂತರ ಮುಂದಿನ ಮಾತು. ಶಂಕರರಾಯರಿಗೆ ನನ್ನ ನಮಸ್ಕಾರಗಳು ಮತ್ತು ನಳಿನಿಯ ಓದು ಹೇಗೆ ಸಾಗುತ್ತಿದೆಯೆಂದು ತಿಳಿಸಲು ಮರೆಯಬೇಡಿರೆಂದು ಉತ್ತರವನ್ನು ಬರೆದನು. ನಳಿನಿಗೂ ತನ್ನ ಭಾವೀ ಪತಿಯನ್ನು ನೋಡಬೇಕೆಂದು ಕಾತುರ. ನೋಡದೆ ಬಹಳಕಾಲವಾಗಿತ್ತು. ತನ್ನ ಪತಿಯಾಗಲಿರುವ ಏಕನಾಥನು ಬರೆದ— 'I have shed my tears' ಎಂಬ ಕವಿತೆಯನ್ನು ಓದಿದಾಗಲಂತೂ ಏಕನಾಥನು ಅಸಾಧಾರಣ ಪಂಡಿತನೆಂದೂ ಆತನಿಗೆ ತಾನು ಅಯೋಗ್ಯಳೆಂದೂ.......ಅವನು ತನ್ನನ್ನು ಅಸಾಧಾರಣ ವಾಗ್ಬಾಣದಿಂದ ಇರಿದರೆ, ತಾನು ಉತ್ತರಕೊಡುವಷ್ಟು ತನ್ನ ಭಾಷಾಶೈಲಿ ಪರಿಪಕ್ವವಾಗಿಲ್ಲವೆಂದೂ ಭಾವಿಸಿದಳು.

ಪುಣೆಯ ಫರ್ಗ್ಯುಸನ್ ಕಾಲೇಜಿನಲ್ಲಿ ವಿನಾಯಕರಾವ್ ಆಪ್ಟೇಕರ್ ಎಂದರೆ ಬಹಳ ಪ್ರತಿಭಾಶಾಲಿ ತರುಣನಾಗಿದ್ದನು. ಈತನೂ ಏಕನಾಥನೂ ದೇಹ ಬೇರೆಯಾಗಿದ್ದರೂ ಆತ್ಮ ಒಂದೆನಿಸುವಂತಿದ್ದಿದ್ದರು. ಒಂದೇ ತರಗತಿಯಲ್ಲಿ ಓದುತ್ತಿದ್ದರು. ಆಪ್ಟೇಕರ್ ಮನೆತನದವರು ಆಗರ್ಭ ಶ್ರೀಮಂತರು. ಅವನ ಊರು ರತ್ನಾಗಿರಿ. ಅಲ್ಲಿ ಅವನ ತಂದೆ ಕಟ್ಟಿಸಿರುವ ಮೂರು–ನಾಲ್ಕು ಮಹಡಿಗಳುಳ್ಳ ನಾಲ್ಕಾರು ಮನೆಗಳನ್ನು ಬಾಡಿಗೆಗೆ ಬಿಡಲಾಗಿತ್ತು. ಅಣ್ಣ ಮತ್ತು ತಂಗಿ ಪ್ರೇಮಲತೆ ಪ್ರೌಢ ಶಿಕ್ಷಣಕ್ಕಾಗಿ ಪುಣೆಗೆ ಬಂದಿದ್ದು 'ಲಾಡ್ಜ್ ಡಿ ಲಕ್ಸ್' ಹೋಟೇಲಿನಲ್ಲಿ ತಂಗಿದ್ದರು. ಅದೇ ಬೀದಿಯ ಇನ್ನೊಂದು 'ಬ್ಲು ಬರ್ಡ್ ರೆಸ್ಟಾರೆಂಟ್'ನಲ್ಲಿ ಏಕನಾಥನು ಇಳಿದುಕೊಂಡಿದ್ದನು. ವಿನಾಯಕರಾವ್, ಪ್ರೇಮಲತೆ ಮತ್ತು ಏಕನಾಥ

—ಮೂರು ಜನರು ತಾವೇತಾವಾಗಿ ಪುಣೆಯಲ್ಲಿ ಯಾವ ಬೀದಿ, ಸಿನೇಮಾ ಥಿಯೇಟರ್, ರಿಕ್ರಿಯೇಶನ್ ಕ್ಲಬ್........ಕಡೆಗಳಲ್ಲಿ ಮೆರೆದಾಡುತ್ತಿದ್ದರು. ಹೋಟೆಲ್ ಮ್ಯಾನೇಜರನಿಗೆ ಒಬ್ಬ ಹೋಟೆಲ್‌ಗೆ ಹೋದರೂ ಈ ಮೂರು ಜನರ ನೆನಪಿನಿಂದ ಮೂರು ಕಪ್ ಟೀಯೋ ಮೂರು ಪ್ಲೇಟು ಜಾಮೂನ್ ........ಜಹಾಂಗೀರೋ ತಂದಿಡುವನು. ವಿನಾಯಕರಾವ್ ಯಾ ಪ್ರೇಮ ಲತೆಗೆ ಆಶ್ಚರ್ಯವಾಗುತ್ತಿತ್ತು! ಏಕನಾಥನಿಲ್ಲದ ದಿನ ಪ್ರೇಮಲತೆಯು 'ಮರುಭೂಮಿಯಲ್ಲಿಯ ಅರಬ ಹೆಂಗಸಿ' ನಂತಾಗಿ, ಕೊರಗುತ್ತಿದ್ದಳು. ಅವಳ ಜೀವನವೇ ಬೇಸರವೆನಿಸುತ್ತಿತ್ತು. ಅವಳು ಸಂಗೀತದಲ್ಲಿ ನಿಸ್ಸೀಮಳಾಗಿ ದ್ದಳು, ಗಾನಕೋವಿದೆಯಾಗಿದ್ದಳು. ದಿಲ್‌ರೂಬ, ಫಿಡ್ಲ್, ಸಾರಂಗಿ ಮೊದಲಾದವುಗಳನ್ನು ನುಡಿಸುತ್ತಿದ್ದಳು. ಹಾಡುವಾಗ ಹತ್ತಾರು ಕೋಗಿಲೆ ಗಳು ಬಂದು ಅವಳ ಕಂಠದಲ್ಲಿ ವಾಸಮಾಡಿಕೊಂಡು ಅವಳ ಕಂಠದಿಂದ ಅಷ್ಟು ಮಧುರವಾದ ಸ್ವರವನ್ನು ಹೊರಡಿಸುತ್ತಿವೆಯೋ ಎಂದು ಭಾಸ ವಾಗುತ್ತಿತ್ತು. ಅಂತೂ ರಸಿಕಜೀವಿ! ವಿನಾಯಕರಾಯನಿಗೆ 'ಪಾಲಿಟಿಕ್ಸ್' ಮತ್ತು 'ಫಿಲಾಸಫಿ' ಅಚ್ಚುಮೆಚ್ಚಿನ ವಿಷಯವಾಗಿತ್ತು. ಏಕನಾಥನಿಗೂ ಸಂಗೀತವೆಂದರೆ ಪಂಚಪ್ರಾಣ. ಆದುದರಿಂದ ಏಕನಾಥನ ಮನಸ್ಸನ್ನು ತನ್ನ ಸುಮಧುರ ಗಾನಶಕ್ತಿಯಿಂದ ಸೆಳೆಯುವುದು ಪ್ರೇಮಲತೆಗೆ ಸುಲಭ ಸಾಧ್ಯವಾಗಿತ್ತು. ಏಕನಾಥ ವಿನಾಯಕರಾವ್‌ನಲ್ಲಿದ್ದ ಸ್ನೇಹ ಪ್ರೇಮಲತೆ ಯಲ್ಲಿ ಪ್ರೇಮವಾಗಿ ವರ್ಗಾಯಿಸಲ್ಪಟ್ಟಿತು. ಆದರೆ ಇದು ಸಹಜವಾಗಿ ಆಗಬೇಕಾದುದೂ ಅಹುದು! ಆ ಮನಮೋಹಕ ರೂಪ, ಆ ಕಣ್ಣಿನಲ್ಲಿಯ ಮಿಂಚು, ತುಟಿಯಲ್ಲಿಯ ತುಂಟನಗೆ, ಆ ಮನೋಹರ ಗಾನ........ಇಷ್ಟಾಗಿ 'ಹೆಂಗಸು' — ನವನಾಗರಿಕತೆಯುಳ್ಳ ತರುಣಿ! ಏಕನಾಥನಿಗೇನೋ ಆನಂದವೇ ಆನಂದ! ಪ್ರೇಮಲತೆ ತನ್ನ ಅಕ್ಕ ವತ್ಸಲೆಯಂತೆ ಇನ್ನೊಬ್ಬಳು ಭಗಿನಿಯೆಂದೇ ಅಷ್ಟರವರೆಗೆ ಅವನು ಭಾವಿಸಿದ್ದನು. ಕ್ರಮೇಣ ತಾನು ಊಟಮಾಡುತ್ತಿದ್ದ 'ಬ್ಲು ಬರ್ಡ್ ರೆಸ್ಟಾರೆಂಟ'ನ ಅಡಿಗೆಯೇ ರುಚಿಸಲಿಲ್ಲ ಏಕನಾಥನಿಗೆ! ಪ್ರೇಮಲತೆಯ ಕೈಯಿಂದಲೇ ಟೀ ಕುಡಿಯಬೇಕು........ ಅವಳು ತಯಾರಿಸಿದ ಬಾಕ್ರಿ, ಚಟ್ಣಿಯೇ ರುಚಿ! ಖೀರು ಸಿಹಿ........ ವಾಂಗೀಭಾತ್ ರುಚಿ!

ಒಂದು ದಿನ ಅವಳ ಅಣ್ಣನು ಹೊರಗೆಲ್ಲೋ ಸಂಚಾರಕ್ಕೆ ಹೋಗಿದ್ದನು. 'ಲಾಡ್ಜ್ ಡಿ ಲಕ್ಸ್' ಎಂದು ಮೇಲೆ ಪ್ರಸ್ತಾಪಿಸಿದೆಯಷ್ಟೆ! ಆದರೆ ಅಣ್ಣ ಮತ್ತು ತಂಗಿ ಆ ಹೋಟೆಲಿನಲ್ಲಿ ಊಟಮಾಡುತ್ತಿರಲಿಲ್ಲ. ಅವರಿಬ್ಬರೇ ಸ್ವಂತ 'ಮೆಸ್ಸಿಂಗ್ ಆರೇಂಜ್‌ಮೆಂಟ್ಸ್' ಮಾಡಿಕೊಂಡಿದ್ದರು. ಏಕನಾಥನು ಅವರ ರೂಮಿಗೆ ಹೋದಾಗ ಪ್ರೇಮಲತೆ ಅಡಿಗೆ ಮಾಡುತ್ತಿದ್ದಳು. ಅವಳಿಗಾಗಲೀ ಅವಳಣ್ಣನಿಗಾಗಲೀ ಹೋಟೆಲಿನಲ್ಲಿ ರೊಕ್ಕ ಕೊಟ್ಟು ಊಟಮಾಡುವ ಶಕ್ತಿ ಇದ್ದಿತು—ಆದರೆ ಹೋಟೆಲಿನ ಆ ಊಟ ಅವರಿಗೆ ಒಗ್ಗದು. ಪ್ರೇಮಲತೆ ಅಡಿಗೆಯಲ್ಲಿ ನುರಿತಕೈ! ಬಾಕ್ರಿ, ಆಂಬ್ಟಿ, ಬಾಜಿ, ವಾಂಗೀಭಾತ್...........ಮೊದಲಾದುವನ್ನು ಮಾಡುತ್ತಿರುವಾಗ ಏಕನಾಥನು ಬಂದನು. ಒಬ್ಬಳೇ ಇದ್ದುದರಿಂದ ಬೇಕಾದಷ್ಟು ಸ್ವತಂತ್ರನಾಗಿ ಮಾತನಾಡಿಸಿದಳು. ಅಣ್ಣನಿದ್ದರೂ ಅವಳಿಗೆ ಅಷ್ಟು ಸ್ವತಂತ್ರ ಇದ್ದಿತ್ತು. ಅವನಿಗೆ ಊಟಮಾಡಲು ಒತ್ತಾಯಪಡಿಸಿದಳು. ಏಕನಾಥನೂ ಕೊನೆಗೆ ಒಪ್ಪಲೇ ಬೇಕಾಯಿತು. ಅವಳು ಬಡಿಸಿದ ಊಟ!........ಊಟ ಮಾಡುತ್ತಿದ್ದಾಗ ಲತೆ ಇನ್ನೂ ಹೆಚ್ಚು ಸಲುಗೆಯಿಂದ 'ನಿಮಗೆ ಊರಿನಲ್ಲಿ ಯಾರಿದ್ದಾರೆ? ಮದುವೆಯಾಗಿಲ್ಲವೇಕೆ? ಯಾವುದಾದರೂ ಹುಡುಗಿಯನ್ನು ನಿಶ್ಚಯಿಸಿದ್ದೀರಾ? ಮೊದಲಾದ ಪ್ರಶ್ನೆಗಳ ಸುರಿಮಳೆಯನ್ನು ಸುರಿಸಿದಳು. ಏಕನಾಥನು ಸ್ವಲ್ಪವೂ ಬೇಸರವಿಲ್ಲದೆ ಎಲ್ಲಾ ಪ್ರಶ್ನೆಗಳಿಗೆ ಸರಾಗವಾಗಿ ಉತ್ತರಕೊಟ್ಟನು. 'ನಿನ್ನಂತೆ ಎರಡು ಹೆಳಲು ಹಾಕಿಕೊಂಡ ಹುಡುಗಿ ಮಾತ್ರ ನನಗೆ ಸಿಗಲೊಲ್ಲಳು. ಈಗಿನ ಕಾಲದಲ್ಲಿ ಮದುವೆಯಾಗುವುದು ಹೆಣ್ಣಿಗಿಂತ ಗಂಡಿಗೆ ಕಷ್ಟವಾಗುತ್ತಾ ಇದೆ. 'ಸ್ತ್ರೀ ಸ್ವಾತಂತ್ರ್ಯ'ದ ಕೂಗು ಎಲ್ಲೆಡೆ ಕೇಳುತ್ತಿದೆ. ಗಂಡ ಹೆಂಡತಿ ಹೇಳಿದಂತೆ ಕೇಳಿದರೆ, ಅವಳ ತಾಳಕ್ಕೆ ಕುಣಿದರೆ ಬಹುಬೇಗ 'ದಿವಾಳಿ'ಯಾಗುತ್ತಾನೆ.' ಗಂಡನಿಗೆ ಸಾಕಷ್ಟು ಖರ್ಚನ್ನು ಕಡಿಮೆಮಾಡುವುದು ಬಿಟ್ಟು, ಒಂದು ದಿನ ಎರಡು ಹೆಳಲಿಗೆ ಎರಡು ರಿಬ್ಬನ್ ಕೇಳುತ್ತಾಳೆ. ಇನ್ನೊಂದು ದಿನ ಒಂದು ಮೋಟಾರ್ ಕಾರನ್ನೇ ತರಬೇಕೆಂದು ಹಟಹಿಡಿಯುತ್ತಾಳೆ. ಕ್ರಮೇಣ ಅಡಿಗೆ ಮಾಡಲಿಕ್ಕೇ ಜನರನ್ನು ತರಬೇಕೆಂದು ಹೇಳುತ್ತಾಳೆ...........ಇಂತಹ ಸುಗ್ರೀವಾಜ್ಞೆಗಳನ್ನು ನೆರವೇರಿಸಲು ಹೋಗಿ, ಗಂಡ 'ಗಾಣದ ಎತ್ತಾಗು

ತ್ತಾನೆ', 'ತಲೆ ಬೋಳಿಸಿಕೊಂಡು ಸುಣ್ಣಗಾಗುತ್ತಾನೆ', ಎಂದುತ್ತರಿಸಿ ದನು. ಪ್ರೇಮಲತೆಯ ಮನಸ್ಸಿನ ಮೇಲೆ ಏನೋ ಒಂದು ಪರಿಣಾಮ ವಾದಂತಾಯಿತು! ಇವರು ನನ್ನ ಒನಪು–ಒಯ್ಯಾರಗಳಿಗೆ ಸಗ್ಗದ ಜನ! ಎಂದು ಗೊತ್ತುಹಚ್ಚಿದಳು. 'ಆಗಲಿ, ನಾಳಿನಿಂದ ಒಂದೇ ಹೆಳಲನ್ನು ಹಾಕಿಕೊಳ್ಳುತ್ತೇನೆ. ಇನ್ನೇನು ಮಾಡಬೇಕು, ಹೇಳಿ' ಎಂದು ಕೇಳಿದಳು. 'ಮತ್ತೆ ನಿನ್ನ ಆಡಂಬರವನ್ನೆಲ್ಲ ಬದಿಗಿರಿಸಿ, 'ಹೆಂಗಸು' (ಪರ್ಫೆಕ್ಟ್ ಉಮನ್) ಆಗಿ, 'ನಿರಾಭರಣ ಸುಂದರಿ' ಯಾಗಿರಲು ಅಭ್ಯಸಿಸಬೇಕು. ಹೆಂಗಸಿನ ಅಂದಚೆಂದ–'ಅಲಂಕಾರ'ಕ್ಕಿಂತ 'ಗುಣದಲ್ಲಿ' ಹೆಚ್ಚಿದೆ ಎಂದನು. 'ಹಾಗಾದರೆ ನಾಳೆ ಬಂದು ನನ್ನನ್ನು ನೋಡಿರಿ.......ನಾನು ಹೇಗೆ ನಿಮಗೆ ತೋರಿಬರುವೆನೆಂದು ಹೇಳಿ'ರೆಂದಳು. ಪ್ರೇಮಲತೆಯೂ ಏಕನಾಥನ ಮಾತಿನ ಸರಣಿಗೆ ಕೋಪಗೊಳ್ಳಲಿಲ್ಲ. ಏಕನಾಥನು ಆಡು ವುದು ನಿಜವೆಂದು ನಂಬಿ, ಅಕ್ಷರಶಃ ಪಾಲಿಸಿದಳು. ಮರುದಿನದಿಂದ ಅವಳು ಕಾಲೇಜ್‌ಗರ್ಲ್ ಆದರೂ ನಡೆ, ನುಡಿ, ಜೀವನಕ್ರಮ, ನಯ, ನಾಜೂಕುಗಳಲೆಲ್ಲ ಫಾರ್ಮರ್‌ಗರ್ಲ್ ಆಗಿಬಿಟ್ಟಳು. ನಿರಾಭರಣ ಸುಂದರಿ ಈಗವಳು! ಹಾಗೆ ಏಕನಾಥನ ಮನಸ್ಸಿನಲ್ಲಿದಂತೆ ನಡೆದರೆ........ಅವನನ್ನು ಮದುವೆಯಾಗಲು ಸಾಧ್ಯವೆಂದು ಅವಳ ಊಹೆ. ಅವಳ ಊಹೆಯೂ ತಪ್ಪಲ್ಲ. ಇತ್ತೀಚೆಗೆ ದೇಶದಲ್ಲಿ ನಡೆದ ಚಳುವಳಿ, ವಿಪ್ಲವಗಳಿಂದ ಏಕನಾಥನ ಮನಸ್ಸು, ಬುದ್ಧಿ—ಎಲ್ಲವೂ ತೀಕ್ಷ್ಣವಾಗಿತ್ತು, ಜೀವನವು ನಿರ್ಮಲವಾಗಿತ್ತು, ಸಂಸ್ಕಾರವು ಉತ್ತಮಗೊಂಡಿತ್ತು. ತಾನು 'ವಿದ್ಯೆ' ಗಾಗಿ ಕಲಿಯುತ್ತೇನೆ. 'ಚಾಕರಿಗಾಗಿಯಲ್ಲ, ಗುಲಾಮಗಿರಿಗಾಗಿಯಲ್ಲ ವೆಂದು ಆತನ ಅಂತರ್ವಾಣಿ ಹೇಳುತ್ತಿತ್ತು. ಇಷ್ಟು ಕುಸುಮಕೋಮಲ ಮನಸ್ಸಿಗೆ, ನಿರಾಡಂಬರ ಮೂರ್ತಿಗೆ ನಳಿನಿಯೇ ಯೋಗ್ಯಳೋ ಅಥವಾ ದೂರದೇಶದಲ್ಲಿ ವಿದ್ಯಾಯಾತ್ರೆಯ ನೆಪದಲ್ಲಿ ಸಿಕ್ಕ ಅಪರಿಚಿತ ವ್ಯಕ್ತಿ ಪ್ರೇಮಲತೆಯೋ........ಅಂತೂ ಏಕನಾಥನ ಮನಸ್ಸು ಹೊಯ್ದಾಡಿತು.

ಪ್ರೇಮಲತೆಯು ಯಾವುದಕ್ಕೂ ಜಗ್ಗುವ ಹುಡುಗಿಯಲ್ಲವಾಗಿತ್ತು. ಮಾತಿನ ಓಘದಲ್ಲಿ ಕೆಲವು ಸಲ ಏಕನಾಥನೇ ಸೋತು ಪ್ರೇಮಲತೆಯೇ ಗೆಲ್ಲುವ ಸನ್ನಿವೇಶವೂ ಒದಗುತ್ತಿತ್ತು. ಯಾವುದು ಏಕನಾಥನಿಗೆ ಅಹಿತವೋ

ಅದನ್ನು ತ್ಯಜಿಸಿ, ಒಂದು ತರದ ಮರೆಯಲಾರದ ಮಧುರ ಬಾಂಧವ್ಯವನ್ನು ಅವನೊಡನೆ ಇಟ್ಟುಕೊಂಡಿದ್ದಳು. ಏಕನಾಥ ಪ್ರೇಮಲತೆಯರು ದೂರ ವಾದರೂ ಅವರ ಅವ್ಯಕ್ತಪ್ರೇಮ, ಬಾಂಧವ್ಯ ದೂರವಾಗಲೊಲ್ಲದು. ಇಂತಹ ಬಲವಾದ ಪ್ರೇಮದ ಪಾಶ ತನ್ನನ್ನು ಬಿಗಿಯಬಹುದೆಂದು ಕನಸಿನಲ್ಲಿಯೂ ಏಕನಾಥನು ಯೋಚಿಸಿರಲಿಲ್ಲ. ಇಷ್ಟರಲ್ಲೇ ಎಂ.ಎ. ಪರೀಕ್ಷೆಯೂ ಸಮಾಪಿಸಿತು. ಇಡೀ ವಿಶ್ವವಿದ್ಯಾಲಯದಲ್ಲೇ ಏಕನಾಥನು ಫರ್ಗ್ಯುಸನ್ ಕಾಲೇಜಿನಿಂದ ಪ್ರಪ್ರಥಮನಾಗಿ ತೇರ್ಗಡೆಹೊಂದಿದನು. 'ಇಂಡಿಯಾ' 'ಇಲಸ್ಟ್ರೇಟೆಡ್ ವೀಕ್ಲಿ' ಮೊದಲಾದ ಪತ್ರಿಕೆಗಳಲ್ಲಿ ಬಿ. ಏಕನಾಥ, ಎಂ.ಎ. ಪರೀಕ್ಷೆಯಲ್ಲಿ ತೇರ್ಗಡೆಹೊಂದಿದವನೆಂದು ಅಚ್ಚಾಯಿತು. 'ಹಾರ್ಟಿ ಕಂಗ್ರ್ಯಾಟ್ಸ್' ಎಂದು ನೂರಾರು ಟೆಲಿಗ್ರಾಮ್ಸ್. ಜೊತೆಗೆ ಶಂಕರರಾಯರದೂ ವೈರ್! 'ಮ್ಯಾರೇಜ್ ಟು ಬಿ ಸೆಟ್ಲ್‌ಡ್, ಸ್ಟಾರ್ಟ್ ಅರ್ಜೆಂಟ್ಲಿ.' ಮತ್ತು ಅವರದೇ ಎರಡನೇ ವೈರ್‌ನಲ್ಲಿ ಅದೇ ಮೇ ತಿಂಗಳಲ್ಲೇ ಮದುವೆ ಮಾಡಬೇಕಾಗಿರುವುದರಿಂದ ಕೂಡಲೇ ಹೊರಟು ಬರಬೇಕೆಂದಿತ್ತು. ಇದೇ ವೇಳೆಗೆ ಪ್ರೇಮಲತೆ ಇಂಟರ್‌ಮೀಡಿಯೇಟ್ ತರಗತಿಯಲ್ಲಿ ಪ್ರಥಮ ಶ್ರೇಣಿಯಲ್ಲಿ ತೇರ್ಗಡೆಹೊಂದಿದ್ದಳು.

ಪ್ರೇಮಲತೆ ಏಕನಾಥನ ಅಕ್ಕ ವತ್ಸಲೆಯಷ್ಟೇ ಕಳಕಳಿಯಿಂದ ಅಷ್ಟು ದೂರದ ಪುಣೆಯಲ್ಲಿ ಕಷ್ಟಸುಖಗಳನ್ನು ವಿಚಾರಿಸಿಕೊಳ್ಳುತ್ತಿದ್ದಳು, ಯೋಗಕ್ಷೇಮದ ಚಿಂತನೆಮಾಡುತ್ತಿದ್ದಳು, ಎಷ್ಟೋ ಸಲ ಅಣ್ಣನಿಂದ ಅವನಿಗೆ ಹಣವನ್ನು ಕೊಡಿಸುತ್ತಿದ್ದಳು. ವಿದ್ಯಾವತಿಯಾದ ಹುಡುಗಿ! ಶ್ರೀಮಂತ ಮನೆತನ!! ಅಣ್ಣನಂತೂ ಏಕನಾಥನ ಜೀವದುಸಿರು. ಅತೀ ಪ್ರಾಚೀನ ಕಾಲವಲ್ಲಿ ಕಟ್ಟಿದ್ದ ಕಟ್ಟಳೆ. ನಿರ್ಬಂಧಗಳ ಸಮೂಹದಿಂದ ಕೂಡಿದ ಧರ್ಮದ ಕೋಟೆಯನ್ನು ಕೂಡ ಮುರಿದು ದುಷ್ಯಂತನು ಶಕುಂತಳೆಯನ್ನು ಗಾಂಧರ್ವ ವಿವಾಹ ಮಾಡಿಕೊಂಡನು, ಅರ್ಜುನನು ಸುಭದ್ರೆ, ಚಿತ್ರಾಂಗದೆಯರನ್ನು ಮದುವೆಯಾದನು, ಕೃಷ್ಣನು ರುಕ್ಮಿಣಿಯನ್ನು ವರಿಸಿದನು ......ಇವೆಲ್ಲವುಗಳಿಗೊಂದು ಅರ್ಥವಿರುವುದಾದರೆ, ನಾನು ಇಂತಹ ಉಚ್ಚ ನಾಗರಿಕತೆಯ ಕಾಲವಲ್ಲಿ.... ...ಸ್ವಯಂ ವಿದ್ಯಾವಂತನಾಗಿ, ವಿದ್ಯಾವತಿಯಾದ ಹೆಣ್ಣನ್ನು ಅವಳ ಬಯಕೆಯಂತೆ ವರಿಸುವುದು ತಪ್ಪೇ? ಇಲ್ಲಿದ್ದ ಸ್ವಾತಂತ್ರ್ಯ ಮತ್ತು

ಆನಂದ-ಶಂಕರರಾಯರ ಮಗಳನ್ನು ವರಿಸುವುದರಲ್ಲಿರುವುದಿಲ್ಲ. ಶಂಕರ ರಾಯರು ತಂದೆಗಿಂತ ಹೆಚ್ಚಾಗಿ ಪ್ರೀತಿಸಿ, ನನ್ನ ವಿದ್ಯೆಗೆ ಪೋಷಕರಾಗಿದ್ದು ದೇನೋ ನಿಜ. ಆದರೆ ಆ ಕಾರಣದಿಂದ ನನ್ನ ವ್ಯಕ್ತಿತ್ವವನ್ನು ಅವರಿಗೆ ಮಾರಿಕೊಳ್ಳಲೇ! ಸ್ವಾತಂತ್ರ್ಯಕ್ಕೆ ತಿಲಾಂಜಲಿಯನ್ನೀಯಲೇ? ಛೀ! ಅದೆಂದಿಗೂ ಆಗದು. ಪ್ರೇಮಲತೆಯೇ ನನಗೆ ಯೋಗ್ಯಳಾದ ಹೆಂಡತಿ ...............ಹೀಗೆಂದು ಅವನು ನಿರ್ಧರಿಸಿದನು. ವಿಚಾರದಲ್ಲಿದ್ದುದು ಆಚಾರದಲ್ಲಿ ಮುಗಿಯಿತು. ಪ್ರೇಮ ವಿವಾಹ! ಅದುದರಿಂದ ಅದಕ್ಕೆ ಹೆಣ್ಣು-ಗಂಡುಗಳ ಪರಸ್ಪರ ಒಪ್ಪಿಗೆ ಇದ್ದರೆ ತೀರಿತು. ಇದರಲ್ಲಿ ವಿಶೇಷವಾಗಿ ತಾಯಿ-ತಂದೆ, ನೆಂಟರಿಷ್ಟರು, ಬಂಧುಬಳಗ—ಈ ನರಂ ಜಾಮಿಗೆ ಆಸ್ಪದವಿರುವುದಿಲ್ಲ. ಅಂತೆಯೇ ಇವರಿಬ್ಬರು ಮದುವೆಯಾದ ನಂತರವೇ ಎಲ್ಲರಿಗೆ ತಿಳಿದುದು ತಾನೇ? ಏಕನಾಥನ ಮತ್ತು ಪ್ರೇಮಲತೆಯ ಸ್ನೇಹಿತರಿಗೊಂದು ಭರ್ಜರಿ ಟಿಫಿನ್! ಹೊಟ್ಟೆಬಿರಿಯುವಷ್ಟು ತಿಂದು, ಹತ್ತಾರು ಪ್ಯಾಕ್ ಸಿಗರೇಟ್ ಸೇದಿ, 'ನಗೆ-ಹೊಗೆ'ಯಲ್ಲಿ ಸರಿಸಮ ಬೆರೆತರು. ಕೆಲದಿನಗಳ ನಂತರ ಏಕನಾಥನು, ತನಗೆ ಮದುವೆಯಾಯಿ ತೆಂದೂ ಶಂಕರರಾಯರು ತನಗೋಸ್ಕರ ಕಾಯುವುದು ಬೇಡವೆಂದು ಪತ್ರ ಮುಖೇನ ತಿಳಿಸಿದನು. ತಂದೆಗೆ ಆಕಾಶವೇ ಕಳಚಿ ತಲೆಯ ಮೇಲೆ ಬಿದ್ದಂತಾಯಿತು. ಅವನು ಈ ವಿಷಯವನ್ನು ಶಂಕರರಾಯರಿಗೆ ಯಾವ ನಾಲಿಗೆಯಿಂದ ತಿಳಿಸುತ್ತಾರೆ? ಅನಸೂಯೆಗಂತೂ ಇಂತಹ ಒಳ್ಳೆಯ, ಹತ್ತಿರದ ಸಂಬಂಧ ಕಡಿಯಿತೆಂದು ಬಹಳ ವ್ಯಸನವಾಯಿತು. ವತ್ಸಲೆ ಮಾತ್ರ, ಅಮ್ಮಾ, ನಾವು ಹೇಳಿದಹಾಗೆ ಕೇಳಿಕೊಂಡಿರಲಿಕ್ಕೆ ಏಕನಾಥನು ನನ್ನ ಹಾಗೆ ಹೆಣ್ಣೆ? ಮೇಲಾಗಿ ತುಂಬಾ ಓದಿದವನು. ತನ್ನ ಒಳ್ಳೆಯದು:- ಕೆಟ್ಟದು ತನಗೆ ತಿಳಿಯದೇ? ಅವನಿಗೆ ಹೇಳಲಿಕ್ಕೆ ನಾವೆಷ್ಟರವರು? ಎಂದು ತಾಯಿಯನ್ನು ಸಮಾಧಾನಗೊಳಿಸಿದಳು.

ಏಕನಾಥನ ಈ ವರ್ತನೆಯು ಶಂಕರರಾಯರಿಗೀಗ ಕಡುಕೋಪ ಕ್ಕಿಟ್ಟುಕೊಂಡಿತು. ಏನೋ ಬಡವರ ಮನೆಯ ಹುಡುಗನೆಂದು ಉಪಕಾರ ಮಾಡಿ ಇದ್ದ ಒಂದೇ ಒಂದು ಹೆಣ್ಣನ್ನು ಕೊಟ್ಟು ಒಳ್ಳೆಯದನ್ನು ಮಾಡೋಣ, ಬಡ ಕುಟುಂಬವೊಂದನ್ನು ಉದ್ಧಾರಮಾಡೋಣ ಎಂದು ಇವರ ಪ್ರೀಯ

ಸ್ಸನ್ನು ಬಯಸಿದರೆ, ಈ ಮೂರ್ಖಸೆಟ್ಟಿ ಹೋದಲ್ಲಿ ಪಟ್ಟಣವೆಂಬಂತೆ ಪುಣೆಗೆ ಹೋಗಿ ಯಾವುದೋ ಹುಡುಗಿಗೆ ಗಂಟುಬಿದ್ದಿದ್ದಾನೆ........ಎಂದು ಸಿಟ್ಟಿನಿಂದ ಕಿಡಿಕಿಡಿಯಾದರು. ಅವನು ಊರಿಗೆ ಬರಲಿ, ಅವನ ಸೊಂಟ ಓರೆಮಾಡುತ್ತೇನೆಂದು ಹಾರಾಡಿದರು. ತಾನಂತೂ ಗಂಡನೊಡನೆ ಸಂಸಾರ ಮಾಡಲಿಕ್ಕೆ ಮನಸ್ಸಿಲ್ಲದೆ ಬೀದಿಬಸವಿಯಾಗಿ ತಿರುಗಬೇಕೆಂದು ತವರು ಮನೆ ಸೇರಿದಳು, ಗಯ್ಯಾಳಿ. ಈಗ ತಮ್ಮನಿಗೆ ನನ್ನ ಮಗಳನ್ನು ಮದುವೆ ಯಾಗದಂತೆ ದುರುಪದೇಶಮಾಡಿದ್ದಾಳೆ ಎಂದು ವತ್ಸಲೆಗೆ ಶಂಕರರಾಯರು ಬಾಯಿಗೆ ಬಂದಹಾಗೆ ಬೈದರು, ಅನಸೂಯೆಗೂ ಬೈಗಳ ಸುರಿಮಳೆ ತಪ್ಪಲಿಲ್ಲ. 'ಊರಲ್ಲಿದ್ದ ಗಂಡಸರೆಲ್ಲರ ಸಹವಾಸಮಾಡುವ ನಿನ್ನಂತಹ ಹೆಂಗಸಿನಿಂದಲೇ ಏಕನಾಥನಿಗೆ ಅಂತಹ ದುರ್ಬುದ್ಧಿ ಬಂತೆಂದು' ಬೈದು ತಮ್ಮ ಸಿಟ್ಟನ್ನು ಶಾಂತಗೊಳಿಸಿಕೊಂಡರು. ವತ್ಸಲೆಯು ಕಣ್ಣೀರುಸುರಿಸಿಕೊಂಡು ತಮ್ಮನಿಗೆ ಪತ್ರಬರೆದಳು. ಆದರೆ ಏಕನಾಥನೇನು ಮಾಡುತ್ತಾನೆ? ಸದ್ಯದಲ್ಲೇ ಇಲ್ಲಿ ಯಾವುದಾದರೂ ಫರ್ಮ್ ಅಥವಾ ಖಾಸಗೀ ಯಾವುದಾದರೂ ಕಾಲೇಜಿನಲ್ಲಿ ಕೆಲಸ ಸಿಕ್ಕಿದ ಕೂಡಲೇ ಪುಣೆಗೆ ಕರೆಯಿಸಿಕೊಳ್ಳುವುದಾಗಿ ಪತ್ರಬರೆದು. ಪತ್ರವೊಡನೆ ತನ್ನ ಮತ್ತು ಪ್ರೇಮಲತೆಯ ಭಾವಚಿತ್ರಗಳನ್ನು ಕಳಿಸಿದನು.

ಟೈಫಾಯ್ಡ್ ಜ್ವರದಿಂದ ಕೃಷ್ಣಮೂರ್ತಿರಾಯರು ಮರಣಹೊಂದಿದರು. ಅನಸೂಯಾ ವತ್ಸಲೆಯರ ದುಃಖ ವರ್ಣನಾತೀತವಾಯಿತು. ಏಕನಾಥನು ತಂದೆಯ ಅಂತ್ಯಕ್ರಿಯೆಗಳನ್ನು ನೆರವೇರಿಸಲು ಸಕಾಲದಲ್ಲಿ ತಲುಪಿದನು. ಎಲ್ಲವೂ ಮುಗಿದನಂತರ ತಾಯಿಯನ್ನೂ ಅಕ್ಕನನ್ನೂ ಪುಣೆಗೆ ಕರೆದುಕೊಂಡು ಹೋದನು. ಆಗ ಅವನು ಅಲ್ಲಿಯ 'ನೇವಾಸದನ ಆರ್ಟ್ಸ್ ಕಾಲೇಜಿನಲ್ಲಿ ಇಂಗ್ಲೀಷಿಗೆ ಪ್ರೊಫೆಸರ್‌ನಾಗಿದ್ದನು. ಅನಸೂಯೆ ವತ್ಸಲೆಯರು ಏಕನಾಥನ ಉತ್ಕರ್ಷವನ್ನು ನೋಡಿ ಹಿರಿಹಿರಿ ಹಿಗ್ಗಿದರು. ಮನೆಯಲ್ಲಿಯ ಒಕ್ಕಟ್ಟಿನ ಜೀವನದಲ್ಲಿ ಮಾತ್ರ ವತ್ಸಲೆ–ಅನಸೂಯೆಯರಿಗಿಂತ ಪ್ರೇಮಲತೆ ತೀರ ಭಿನ್ನವಾಗಿದ್ದಳು. ತಾನು ವಿದ್ಯಾವತಿಯೆಂಬೊಂದು ಹೆಮ್ಮೆ ಅವಳನ್ನು ಯಾವಾಗಲೂ ಹಾಳುಮಾಡುತ್ತಿತ್ತು. ತನ್ನ ಹೆಂಡತಿ ಪ್ರೇಮಿಗೂ ಅಕ್ಕನಿಗೂ ಸರಿಬರುವುದಿಲ್ಲವೆಂದು ತಿಳಿದು ಅವರಿಗೇ ಪ್ರತ್ಯೇಕ

ವಾಗಿ ಇನ್ನೊಂದು 'ಖೋಲಿ'ಯನ್ನು ಬಾಡಿಗೆಗೆ ತೆಗೆದುಕೊಟ್ಟನು. ಆಗ ವತ್ಸಲೆಗೂ ಅನಸೂಯೆಗೂ ಸುಖದಿಂದಿರಲಿಕ್ಕೆ ಸಾಧ್ಯವಾಯಿತು. ವತ್ಸಲೆಯ ಹಿರಿಯಾಸೆ ಮಾತ್ರ ಕೈಗೂಡಲಿಲ್ಲ. ತಮ್ಮನ ಹೆಂಡತಿಯು ತಲೆ ಬಾಚುವುದು........ಹೇಳಲು ಹಾಕುವುದೆಲ್ಲಾ—ಕನಸಾಯಿತು. ವತ್ಸಲೆ—ಅನಸೂಯೆಯರಿಗೆ ಏಕನಾಥನು ಯಾವುದರಲ್ಲಿಯೂ ಕಡಿಮೆಯಾಗದಂತೆ ನೋಡಿಕೊಂಡಿದ್ದನು. ಆದರೆ ಆ ಬಿಂದುಪುರವೆಲ್ಲಿ?........ಈ ಪುಣೆಯೆಲ್ಲಿ? ಅಲ್ಲಿಯ ದಿನ ನಿತ್ಯದ ಚಿರಪರಿಚಿತವಾದ—'ಏನಮ್ಮಾ! ಚೆನ್ನಾಗಿದ್ದೀರಾ ಅನಸೂಯಮ್ಮಾ?........ಎಲ್ಲಿ' ಇಲ್ಲಿಯ 'ಕಾಯ್ ಪಾಯಿಜೆ.... ... ಜೆವಣ್ ದಲಾಕಾಯ್! ಮುಂತಾದ ಮಾತುಗಳೆಲ್ಲಿ? ಇಲ್ಲಿಯ ಹೆಂಗಸ ರಂತೂ ಮರ್ಯಾದೆಮೀರಿ ಸೈಕಲ್ ಸವಾರಿಮಾಡುತ್ತಾರೆ. ಗಂಡನನ್ನು ಅಡಿಗೆಯ ಮನೆಗೆ ಅಟ್ಟಿ ಇವರು ಸಿನೇಮಾ ಥಿಯೇಟರಿಗೆ ಹಾರುತ್ತಾರೆ. ಗಂಡನೆದುರಿಗೇನೆ ಬೇರೆ ಗಂಡಸಿನ ಕೈಗೆ ತಮ್ಮ ಕೈ ಕೊಟ್ಟು 'ಶೇಕ್ ಹ್ಯಾಂಡ್ಸ್' ಪಡೆಯುತ್ತಾರೆ. ಇವನ್ನೆಲ್ಲಾ ನೋಡಿ ಅನಸೂಯೆಗೆ ಒಳಗೊಳಗೇ ದಿಗಿಲು. ಶಹರಿನ ನಾಗರಿಕತೆ, ಸಂಸ್ಕಾರಕ್ಕೆ ಮರುಳಾಗಿ, ಎಲ್ಲಿಯಾದರೂ ವತ್ಸಲೆ ಅಡ್ಡದಾರಿಯನ್ನು ತುಳಿದರೇನುಗತಿ? ಈಗಂತೂ ಸೇವಾಸದನ ಕಾಲೇಜಿನ ಪ್ರೊಫೆಸರ್ ಬಿ. ಏಕನಾಥ್, ಎಂ.ಎ.,—ಇವರ ಅಕ್ಕ! ಏಕನಾಥನಿಗೆ ಕಳಂಕ ತಪ್ಪುತ್ತದಯೇ? ದೇವಾ! ನಾನು ಜೀವ ದಿಂದಿರುವವರೆಗೆ ಇಂತಹ ಘಟನೆ ನಡೆಯದಿರಲಿ. ನನ್ನ 'ಅವರು'—ಯಜಮಾನರು ಮರ್ಯಾದೆಯಿಂದ ನಾಲ್ಕುಕಾಲ ಬಾಳಿ ಕಣ್ಣು ಮುಚ್ಚಿದರು, ಮಕ್ಕಳು ಸುಖವಾಗಿ ಮರ್ಯಾದೆಯಿಂದ ಕಾಲಕಳೆಯುವುದನ್ನು ನೋಡಿ ಒಂದ ದಿನ ಕಣ್ಣು ಮುಚ್ಚುವಂತೆಮಾಡು, ದೇವಾ! ಎಂದು ಸದಾ ದೇವರ ಧ್ಯಾನಮಾಡುತ್ತಿದ್ದರು ಅನಸೂಯಮ್ಮಾ!

ಒಂದೆರಡು ವರ್ಷಗಳವರೆಗೆ ವತ್ಸಲೆಯೇನೋ ಮರ್ಯಾದೆಯಿಂದ ಕಾಲಕಳೆದಳು. ಆದರೆ ಪುಣೆಗೆ ಬಂದಂದಿನಿಂದ ಅವಳ ರೀತಿನೀತಿಗಳು ಬದಲಾಯಿಸುತ್ತಾ ಬಂದಿದ್ದವು. ಮೊದಲೇ ಅವಳು 'ಬಾಗಿ ಬಳುಕುವ' ಎಳೆಯ ಬಾಳೆಮರದಂತಿರುವ ಸುಂದರದೇಹ. ಅಸಾಧಾರಣ ರೂಪಗ ಳಿಂದ 'ಪ್ರೇಮಾಯತನ'ದ ಆರಾಧನಾ ದೇವತೆಯಾಗಿದ್ದಳು. ಭಾವ—

ಜೀವಗಳ ಸಂಸ್ಕಾರದಿಂದ, ನಾಗರಿಕತೆಯ ಅಮಲಿನಿಂದ ವತ್ಸಲೆ ಈಗ ಅಪ್-ಟು-ಡೇಟ್ ಲೇಡಿಯಾಗಿಬಿಟ್ಟಳು. ಮ್ಯೂಸಿಕ್‌ಕ್ಲಾಸ್, ಡ್ಯಾನ್ಸಿಂಗ್ ಲೆಸನ್ಸ್, ಲೇಡೀಸ್ ಕ್ಲಬ್—ಮೊದಲಾದವುಗಳಿಗೆ ಹಾಜರಾಗುವುದು ಅವಳ ದಿನ ನಿತ್ಯದ ಕಾರ್ಯವಾಗಿತ್ತು. ತಮ್ಮನ ಪ್ರೋತ್ಸಾಹವೂ ಇದಕ್ಕೆ ತುಂಬಾ ಇತ್ತು. ಪ್ರೊಫೆಸರರ ಅಕ್ಕನೆಂದ ಮೇಲೆ ಹಳ್ಳಿಯ ಹೆಣ್ಣುಮಗಳಂತೆ ಇರುವುದೇ? ಪ್ರಸಿದ್ಧ ಸಂಗೀತ ಉಪಾಧ್ಯಾಯರಿದ್ದ ಗಂಧರ್ವ ಮಹಾ ಸಂಗೀತ ವಿದ್ಯಾಲಯಕ್ಕೆ ಅವಳು ಹೋಗುತ್ತಿದ್ದಳು. ನೃತ್ಯದಲ್ಲಿಯೂ ಹೆಸರಾಂತ ಉದಯಶಂಕರ, ಕುಲಕರಣಿ ಶ್ರೀನಿವಾಸ—ಇಂತಹ ಮಹನೀಯರೊಡನೆ ಒಡನಾಡಿದ, ಅವರ ಶಿಷ್ಯನಾದ ರಾಜಗೋಪಾಲನಿಂದ ಆ ಶಾಸ್ತ್ರದಲ್ಲಿ ಪ್ರವೀಣನಾದ ಅವನೊಡನೆ ಕಲಿಯುತ್ತಿದ್ದಳು. ಇವುಗಳಿಗೆಲ್ಲಾ ಮನಸ್ಸುಕೊಟ್ಟ ಮಗಳು ವತ್ಸಲೆ ತನ್ನ ಅಧಃಪತನಕ್ಕೆ ತಾನೇ ಕಾರಣಳಾಗುತ್ತಾಳೆಂದು ತಾಯಿ ಅನಸೂಯಮ್ಮ ಬಹಳ ನೊಂದುಕೊಂಡಳು. ವಿಧವಿಧವಾಗಿ ಮಗಳಿಗೆ ಬುದ್ಧಿ ಹೇಳಿದಳು. ವತ್ಸಲೆ ಆ ಉಪದೇಶವನ್ನು ಕೇಳುವ ಪರಿಸ್ಥಿತಿಯಲ್ಲಿಲ್ಲವಾಗಿತ್ತು. ಎಲ್ಲಾ ಕಾಲದಲ್ಲಿಯೂ, ತಾವು ಹೆತ್ತು, ಹೊತ್ತು, ಸಾಕಿಸಲಹಿದವರೆಂದು ಹಿರಿಯತನವನ್ನು ಪ್ರದರ್ಶಿಸಿ, ಅಧಿಕಾರವಾಣಿಯಿಂದ ಮಕ್ಕಳಿಗೆ ಉಪದೇಶಕೊಡಲಿಕ್ಕೆ ಹೋದರೆ ಕೇಳುವ ಸಾವಧಾನತೆ ಮಕ್ಕಳಿಗೆಲ್ಲಿರುತ್ತದೆ? ಗಂಧರ್ವ ವಿದ್ಯಾಲಯದಲ್ಲಿರುವ ಸಾಧಾರಣ ನೂರು-ನೂರೈವತ್ತು ವಿದ್ಯಾರ್ಥಿನಿಯರಲ್ಲಿ ವತ್ಸಲೆಯೇ ಕುಶಾಗ್ರ ಬುದ್ಧಿಯವಳಾಗಿದ್ದಳು. ಇದನ್ನು ರಾಜಗೋಪಾಲನು ಕಂಡುಕೊಂಡನು. ಮೊದಮೊದಲು ಅವನಿಗೆ ಇವಳ ಪರಿಚಯಮಾಡಿಕೊಳ್ಳುವುದೊಂದು ಸಮಸ್ಯೆಯಾಯಿತು! ಯಾವುದೋ ಗಲ್ಲಿಯಿಂದ ದಿನಾಲೂ ರಾಜಗೋಪಾಲನಲ್ಲಿಗೆ ಬರುವಳು........ಕುಮಾರಿಯೋ ಮದುವೆಯಾದವಳೋ........ಇವಳ ಸ್ಥಿತಿಗತಿಗಳನ್ನು ತಿಳಿದುಕೊಳ್ಳಬೇಕೆಂದು ರಾಜಗೋಪಾಲನಿಗೆ ಇಷ್ಟ! ಒಂದು ದಿನ ವತ್ಸಲೆಯನ್ನು ನೋಡಿ, ಅವಳ ಸಂಗೀತಾದಿ ಕಲೆಗಳಿಗೆ ಮೆಚ್ಚಿ, ತಲೆದೂಗಿ, ಒಂದು ತೃಪ್ತಿಸೂಚಕ ಭಾವವನ್ನು ವ್ಯಕ್ತಪಡಿಸುವಂತೆ, ಮುಗುಳುನಗೆ ನಕ್ಕು ಅವಳು ಯಾವ ಬೀದಿಯಲ್ಲಿರುವಳೆಂದು ಪ್ರಶ್ನಿಸಿದನು. ಅವಳೂ ತುಸು ನಾಚಿಕೆಯಿಂದ 'ಶಿವಾಜಿ

ರೋಡ್‌ನಲ್ಲಿಯ ಆರ್ನೂರ್ರೈವತ್ತನೆಯ ನಂಬರಿನ ಖೋಲಿಯಲ್ಲಿ' ಎಂದು ಉತ್ತರವಿತ್ತಳು. 'ನಾನು ನಿನ್ನ ರೂಮನ್ನು ನೋಡಲು ಬರಬಹುದೇ?' ಎಂದು ಪುನಃ ಪ್ರಶ್ನಿಸಿದನು. 'ಅದಕ್ಕೇನಡ್ಡಿ?' ಎಂದು ಸಮ್ಮತಿಸೂಚಕ ವಾದ ದನಿಯಿಂದ ಉತ್ತರಿಸಿದಳು. 'ಹಾಗಾದರೆ ಭಾನುವಾರ ಮಧ್ಯಾಹ್ನ ನಾಲ್ಕು ಘಂಟೆಗೆ ಸರಿಯಾಗಿ ಬರುವೆನೆಂದೂ ಆ ವೇಳೆಯನ್ನು ನಿರೀಕ್ಷಿ ಸುತ್ತಾ ಇರಬೇಕೆಂದೂ' ಅವಳಿಗೆ ತಿಳಿಸಿದನು. ರಾಜಗೋಪಾಲನಿಗೆ ಏಕನಾಥನ ನಿಕಟಪರಿಚಯವಿರುವುದಾದರೂ ಇವಳು ಆತನ ಅಕ್ಕನೆಂದು ಇವನಿಗೆ ತಿಳಿದವಿಷಯುವಲ್ಲ. ಈತನಿಗೂ ಅವಳ ರೂಮಿಗೆ ಹೋಗುವುದ ರಲ್ಲಿ........ಅವಳ ನಿಕಟ ಪರಿಚಯಮಾಡಿಕೊಳ್ಳುವುದರಲ್ಲಿ ಒಂದು ಉದ್ದೇಶ ವಿತ್ತು; ಒಂದು ಆಶಯುವಿತ್ತು. ಮದುವೆಯಾಗಿಲ್ಲವಾದರೆ, ಅವಳನ್ನು 'ಲವ್–ಮ್ಯಾರೇಜ್' ಮಾಡಿಕೊಳ್ಳುವುದು—ಇದಕ್ಕೆ ವತ್ಸಲೆಯೊಪ್ಪ ಬಹುದು, ಒಪ್ಪಿಯೂ ಒಪ್ಪುವಳು. ನನ್ನ ಅಪ್ರತಿಮ ವಿದ್ಯಾಪ್ರೌಢಿಮೆ ಯನ್ನಾದರೂ ಗೌರವಿಸಿ, ನನಗೆ ಮರುಳಾಗದೆ ಇರುವಳೇ? ಎಂದು ಯೋಚಿಸಿದನು.

ಆ ಭಾನುವಾರವೂ ಬಂತು. ವತ್ಸಲೆಯ ಸುದೈವತೆರೆದಿತ್ತೋ ಯಾರು ಬಲ್ಲರು? ಅಂತೂ, ಆ ದಿನ ಅವಳ ತಾಯಿ ಅನಸೂಯಮ್ಮ 'ನೇಪಿಯರ್ ರೋಡ್'ನಲ್ಲಿರುವ ಮಗನ 'ಮಾಲತಿವಿಲ್ಲಾ' ಬಂಗಲೆಗೆ ಹೋಗಿದ್ದಳು. ವತ್ಸಲೆಯೊಬ್ಬಳೇ 'ಪಿಯಾಮಿಲನಕೋ ಜಾನಾ' ಎಂದು ಹಾರ್ಮೋನಿ ಯಮ್ ನುಡಿಸುತ್ತಿದ್ದಿದ್ದಳು. ರಾಜಗೋಪಾಲರು ಬಂದು ಒಳಕ್ಕೆ ಪ್ರವೇಶಿ ಸಿದರು. ಬೇಕಾದಷ್ಟು ವೇಳೆಯವರೆಗೆ ಅವಳೊಡನೆ ಮಾತನಾಡಿದರು. ಅವಳನ್ನು ಬಿಟ್ಟು ಮನೆಗೆ ಹೋಗುವೆನೆಂದರೆ ಅವರಿಗೆ ಕಾಲೇಬರದು. ಅವಳೇ ತನ್ನ ಕುಸುಮಕೋಮಲವಾದ ಕೈಗಳಿಂದ ತಯಾರಿಸಿದ 'ಟೀ' ಯನ್ನು ಕುಡಿದು, ಅವರಿಗೆ ಸ್ವರ್ಗಲೋಕದಲ್ಲಿರುವೆನೆಂದು ಭ್ರಮೆಯಾಗಿರ ಬೇಕು. ಅವಳ ಕಮಲದಂತಹ ಮುಖ, ಎಳೆಯ ಬಾಳೆಯದಿಂಡಿನಂತಿ ರುವ ತೋಳುಗಳು—ಇನ್ನೂ ಇಂತಹ ನೂರಾರು–ಕವಿಗಳು ತಮ್ಮ ಕವಿತೆ ಗಳಲ್ಲಿ ಹೊಗಳುವ ಎಲ್ಲಾ ರೀತಿಯ ಸುಂದರ ಲಕ್ಷಣಗಳನ್ನು ಪ್ರತ್ಯಕ್ಷಕಂಡ ರಾಜಗೋಪಾಲರಿಗೆ ಸುಮ್ಮನಿರಲಾಗಲಿಲ್ಲ. ಕ್ಷಣಾರ್ಧದಲ್ಲಿ ವತ್ಸಲೆ–ರಾಜ

ಗೋಪಾಲರು ದೇಹವೆರಡಾದರೂ ಆತ್ಮ ಒಂದೇ ಎಂದು ಜಗತ್ತಿಗೆ ಸಾರು ವರೋ ಎಂಬಂತೆ ಒಬ್ಬರ ತೋಳ್ತೆಕ್ಕೆಯಲ್ಲಿ ಇನ್ನೊಬ್ಬರು ಬಲಿಬಿದ್ದರು. ವತ್ಸಲೆಯು ರಾಜಗೋಪಾಲರ ಬಾಹುಪಾಶದಿಂದ ಬಂಧಿತಳಾದಳು. ಅವ ಳಿಂದ ಬೇಕಾದಷ್ಟು ಅಧರಾಮೃತವನ್ನು ಕುಡಿದು, ತಣಿದು, ತನ್ನ ಮನೆಗೆ ಹಿಂದಿರುಗಿದರು. ಅವರಿಗೆ ಆ ದಿನ ಕಳೆದವೇಲೆ 'ರಸನಿಮಿಷ' ಗಳೆನಿಸಿರಬೇಕು.

ವತ್ಸಲೆಯು ಅಂದು ಮಿಂಚಿನಂತೆ ನಡೆದುಹೋದ ಕಾರ್ಯವನ್ನು ನೋಡಿ, ತನ್ನ ಚಿತ್ತಚಾಂಚಲ್ಯಕ್ಕೆ ತಾನೇ ಆಶ್ಚರ್ಯಪಟ್ಟಳು. ಸ್ತ್ರಿಯರ ಮನಸ್ಸು ಇಷ್ಟು ದುರ್ಬಲವೇ! ಈಗ ನಡೆದ ಘಟನೆಯಿಂದ ತನ್ನ ದೇಹವೂ ಮನಸ್ಸೂ—ಎರಡೂ ದುರ್ಬಲವಾಗಿವೆಯೆಂದು ಅವಳಿಗೆ ದೃಢವಾಯಿತು. ರಾಜಗೋಪಾಲನಿಂದ ಬಿಡುಗಡೆಹೊಂದಿದಾಗ, ನ್ಯಾಯಾಧಿಪತಿಯ ಎದು ರಿಗೊಬ್ಬ ಅಪರಾಧಿಯಂತಿದ್ದಿದ್ದಳವಳು. ಆ ದಿನ ನಡೆದ ಘಟನೆ! ಅಯ್ಯಬ್ಬ! ತಾಯಿಗಿದು ತಿಳಿದರೆ! ಆತ್ಮವಂಚನೆ! ಅಂದಿನದು ಹೇಗೋ ಹೊಗೆಗಾಳಿ ಯಲ್ಲಿ ತೇಲಿದಂತೆ ತೇಲಿಹೋಯಿತು! ಇನ್ನು ಮುಂದೆ ತಾಯಿಯು ಮನೆ ಯಲ್ಲಿದ್ದಾಗ ರಾಜಗೋಪಾಲ ಬಂದರೆ—ಬಂದರೇನು? ಹೊಸಬರು ಯಾರೂ ಅಲ್ಲವಲ್ಲ........ಕಲಿಸುವ ಮೇಷ್ಟ್ರು........ಹಾಗೆಯೇ ಉತ್ತರ ಕೊಟ್ಟು ತಾಯಿಯನ್ನು ಸಮಾಧಾನಪಡಿಸಬಹುದು. ಇವೆಲ್ಲಾ ತಾತ್ಕಾಲಿಕ ಹಂಚಿಕೆಗಳು, ನಿಜ! ಆದರೆ ಮುಂದೆ? ರಾಜಗೋಪಾಲರನ್ನೇನೋ ಬುಟ್ಟಿಯಲ್ಲಿ ಹಾಕಿಕೊಂಡು, ನೃತ್ಯಶಾಸ್ತ್ರದ ಪೂರ್ಣ ಗುಟ್ಟನ್ನು ತಿಳಿದು, ಶಾಂತಾಅಪ್ಟೆ, ರಾಮಗೋಪಾಲ, ಕುಲಕರ್ಣಿ ಶ್ರೀನಿವಾಸ, ಉದಯಶಂಕರ, ಶಾಂತಾ ಹೇಮಾವತಿ ಮೊದಲಾದವರಂತೆ ಪ್ರಸಿದ್ಧ ನೃತ್ಯರಾಣಿಯಾಗ ಬಹುದು. ಇದಕ್ಕಿಂತ ಹೆಚ್ಚಿಗೆ ಇನ್ನೇನು ಭಾಗ್ಯಬೇಕು? ಅವನ ಅತಿಸ್ನೇಹ ದಿಂದ ನನಗೆ ಒಳ್ಳೆಯದೋ ಕೆಡಕೋ .......ಅದನ್ನು ತೆಗೆದುಕೊಂಡು ನಾನೇನು ಮಾಡಬೇಕಾಗಿದೆ? ಸಾಧ್ಯವಾದರೆ ರಾಜಗೋಪಾಲನನ್ನೇ ಮದುವೆಯಾಗುವುದೆಂದು ವಿಚಾರದ ಓಟದ ಕೊನೆಯಲ್ಲಿ ಒಂದು ಗುರಿಗೆ ಬಂದುಮುಟ್ಟಿದಳು.

ರಾಜಗೋಪಾಲನಿಗೆ ವತ್ಸಲೆಯ ಹುಚ್ಚು ಪೂರ್ಣ ಹಿಡಿಯಿತು. ಅವಳು ಒಂದು ದಿನ ಡ್ಯಾನ್ಸಿಂಗ್ ಕ್ಲಾಸಿಗೆ ಬರದಿದ್ದರೆ ವಿಶೇಷ ಚಡಪಡಿಸು

ತ್ತಿದ್ದನು. ರಾಜಗೋಪಾಲನ ಪ್ರೇಮವು ಮಾತ್ರ ಶಾಶ್ವತವಲ್ಲವಾಗಿತ್ತು. ಊರಿನಲ್ಲಿ ಅನೇಕ ಹೋಟಲುಗಳಿದ್ದರೆ, ಹೇಗೆ ಜನರು ಒಂದು ಅಂಗಡಿ ಯಲ್ಲಿ ಉಪ್ಪಿಟ್ಟು. ಇನ್ನೊಂದಂಗಡಿಯಲ್ಲಿ ಚೌಚೌ ಮತ್ತೊಂದರಲ್ಲಿ ಕೇಸರಿ ಭಾತ್........ತಿಂದು, ಒಂದನ್ನು ಹೊಗಳಿ, ಇನ್ನೊಂದನ್ನು ತೆಗಳುವರೋ, ಹಾಗೆಯೇ ರಾಜಗೋಪಾಲನ ಪ್ರೇಮ–ವ್ಯವಹಾರ! ಇಂದು ವತ್ಸಲೆಗಾಗಿ ಕೊರಗಿ ಕೊರಗಿ ಕ್ಷೀಣನಾದವನು. ಅವರ ಪ್ರೇಮಾರಾಧನ ಭಕ್ತನಾದವನು ಇನ್ನೊಂದು ದಿನ ಇನ್ನಾವ ಸುಂದರಿಯ ಬಾಹುಪಾಶದಲ್ಲಿ ಸಿಕ್ಕಿ ನಲಿದಾಡು ತ್ತಿದ್ದನೋ ಹೇಳಲು ಬರುವಂತಿಲ್ಲವಾಗಿತ್ತು. ಅವನ ದೃಷ್ಟಿಯಲ್ಲಿ ಹೆಂಗ ಸರು ಶಾಶ್ವತ ಪ್ರೇಮಕ್ಕೆ ಅರ್ಹರಲ್ಲ! ಕ್ಷಣಿಕಕಾಮಕ್ಕೆ ಅರ್ಹರು! ಹೆಂಗಸ ರನ್ನು ವಿಷಯಾಸಕ್ತಿ–ಆ ಸುಖಲೋಲುಪತೆಯ ಅಳತೆಗೋಲಿನಿಂದ ಅಳೆ ಯುವ ಮನುಷ್ಯ ಪ್ರಾಣಿಯಾಗಿದ್ದನು. ಕ್ರಮೇಣ ಅನಸೂಯೆಗೂ ತನ್ನ ಮಗಳ ಚಲನ–ವಲನಗಳೆಲ್ಲ ತಿಳಿದುಬಂದುವು. ಹುಟ್ಟಿದಂದಿನಿಂದ ಮುದ್ದಿನ ಗಿಣಿಮರಿಯಂತೆ ಬೆಳೆದ ಮಗಳು! ಒಂದು ದಿನವೂ ಕೋಪದಿಂದ ತಾಯಿ ಗದರಿಸಿದವಳಲ್ಲ. ಅಷ್ಟು ವಿಶಾಲವಾಗಿ, ಹುಲುಸಾಗಿ ಅವಳ ವಾತ್ಸಲ್ಯದ ಬಳ್ಳಿಹಬ್ಬಿತ್ತು! ಅವಳೇನು ಮಾಡುತ್ತಾಳೆ! ತಮ್ಮನು– ಏಕನಾಥನು ಕಷ್ಟಪಟ್ಟು ದುಡಿದ ಹಣದಿಂದ ಸುಖವಾಗಿ–ಹಾಯಾಗಿ ಜೀವನ ನಡೆಯಿಸುವಂತೆ ಮಗಳಿಗೆ ಹೇಳುವಳೇ? ಯಾವುದಾದರೂ ಸ್ಕೂಲಿನ ಮಿಸ್ಟ್ರೆಸ್ ಆಗೆಂದು ಹೇಳುವಳೇ? ರಾಜಗೋಪಾಲನೊಡನೆ ಮಗಳಿಗಿದ್ದ ಸಂಬಂಧ........ಅವಳಿಗೆ ಗೊತ್ತಿರಲಿಲ್ಲವೇ? ಆದರೂ ಆವಳು ತನ್ನಪಾಡಿಗೆ ತಾನಿದ್ದುಬಿಟ್ಟಳು. ರಾಜಗೋಪಾಲನು ಎಂದಿನಂತೆ ದಿನವೂ ವತ್ಸಲೆಯಿರುವಲ್ಲಿಗೆ ಬರುತ್ತಿದ್ದನು. ಮನೆಯಲ್ಲಿ ಅನಸೂಯೆ ಎದುರಿಗೆ ವತ್ಸಲೆಯೊಡನೆ ಮಾತನಾಡಲು ಸಂಕೋಚಪಟ್ಟುಕೊಂಡು ವತ್ಸಲೆಯನ್ನು ಹೊರಕ್ಕೆ 'ವಾಕಿಂಗ್' ಕರೆದುಕೊಂಡುಹೋಗುತ್ತಿದ್ದನು. ಇದು ಅನಿಯ ಮಿತ ದಿನಗಳವರೆಗೆ ನಡೆಯಿತು.

ರಾಜಗೋಪಾಲನ ಚೆಲ್ಲಾಟ ವತ್ಸಲೆಗೆ ಪ್ರಾಣಸಂಕಟಕ್ಕಿಟ್ಟು ಕೊಂಡಿತು. ಈಗ ಒಂದೆರಡು ತಿಂಗಳುಗಳಿಂದ ಅವಳಿಗೆ ಮನೆಬಿಟ್ಟು ಹೊರಗೆ ಹೋಗುವುದೆಂದರೆ ಒಗ್ಗದು. ಮೈಯೆಲ್ಲಾ ಭಾರವಾಗಿ ತೋರು

ತ್ತಿತ್ತು. ಕೆಲಸವೇನನ್ನೂ ಮಾಡಲಾರಳು. ಒಂದುತರದ ಉದಾಸೀನತೆ ಅವಳ ದೇಹ, ಮನಸ್ಸುಗಳೆಲ್ಲವನ್ನೂ ಆವರಿಸಿತ್ತು. ತಮ್ಮ ಏಕನಾಥನಿಗೆ ಅಕ್ಕ ಸಂಗೀತ, ನೃತ್ಯಗಳನ್ನು ಕಲಿಯುತ್ತಿದ್ದಾಳೆಂದಷ್ಟೇ ವಿಷಯ ಗೊತ್ತು! ರಾಜಗೋಪಾಲನು ತನ್ನ ಅಕ್ಕನನ್ನು ಬಹುವಾಗಿ ಪ್ರೀತಿಸುತ್ತಾನೆಂದೂ ತಿಳಿದಿತ್ತು! ತನ್ನಂತೆಯೇ ಅವಳೂ ಸುಖವನ್ನು ಬಯಸುತ್ತಾಳೆಂದೂ ಗೊತ್ತು! ಆದರೆ ಅವನು ಅವರಿಬ್ಬರಲ್ಲಿಯ ಗಾಢಮೈತ್ರಿಯನ್ನು ಅಪಾರ್ಥ ಮಾಡಲಿಲ್ಲ. ಈಗೀಗ ರಾಜಗೋಪಾಲನು ವತ್ಸಲೆ ಇರುವಲ್ಲಿಗೆ ಹೆಚ್ಚಾಗಿ ಬರುತ್ತಿದ್ದನು. ಆದರೆ ವತ್ಸಲೆಗೆ ಅವನೊಡನೆ ಸರಸಸಲ್ಲಾಪವು ಮೊದಲಿನಷ್ಟು ಬೇಕಾಗಿರಲಿಲ್ಲ. ಅವಳಿಗೆ ತನ್ನ ಜೀವವೇ ಕಲ್ಲುಗುಂಡಿನಷ್ಟು ಭಾರವಾಗಿತ್ತು. ಸಾಲದುದಕ್ಕೆ ಅವಳ ಜೀವಮಾನದಲ್ಲೇ ಎಂದೂ ಕಂಡುಬರದ-ಅನುಭವಿಸದ ಹೊಸ ಅನುಭವ!........ಮೂರು ತಿಂಗಳ ಗರ್ಭಿಣಿ!! ಇದರಿಂದ ಯಾರಿಗೂ ಸಂತೋಷವಾಗಿಲ್ಲ. ತಾಯಿಗಂತೂ ಸಂತೋಷದ ಬದಲು ವಿಪರೀತ ದುಃಖವೇ. ಯಾವ ಸಾಧ್ವೀಶಿರೋಮಣಿಗೆ ತನ್ನ ಮಗಳು ಅಡ್ಡದಾರಿ ತುಳಿಯುವುದು ಸಂತೋಷಧಾಯಕ? ನೇರವಾಗಿ ತನ್ನ ಕಣ್ಣೆದುರಿಗೆ ಹೀಗೆ ನಡೆದರೆ ತಾಯಿಗೆ ಜೀವಿಸಲು ಮನಸ್ಸುಬಂದೀತೇ? ಅನಸೂಯೆಯೂ ಅಂತೆಯೇ ಮರಣದ ಸವಿಕನಸನ್ನು ಕಾಣುತ್ತಿದ್ದಳು. ಅವಳಿಗಿನ್ನೇನು ಭಾಗ್ಯಕಾದಿದೆ ಈ ಲೋಕದಲ್ಲಿ? ಎಂದಿನಂತೆ ಚಪಲಚಿತ್ತನಾದ ರಾಜಗೋಪಾಲನು ವತ್ಸಲೆಯೊಡನೆ ಕುಳಿತುಕೊಂಡು ಮಾತನಾಡುತ್ತಿದ್ದನು. ಆಗ ವತ್ಸಲೆ, 'ನಾನು ನಿಮ್ಮನ್ನೇ ನಂಬಿಕೊಂಡಿರುತ್ತೇನೆ. ಈ ದಾಸಿಯನ್ನು ನಡುನೀರಿನಲ್ಲಿ ಕೈಬಿಡದೆ ಕಾಪಾಡುವುದು ನಿಮ್ಮ ಕರ್ತವ್ಯ' ಎಂದು ಅವನೆದುರಿಗೆ ಗಳಗಳನೆ ಅತ್ತು ಕಣ್ಣೀರು ಕೋಡಿಹರಿಸಿದಳು. ರಾಜಗೋಪಾಲ ತಲೆಯನ್ನು ಮಾತ್ರ ಅಲ್ಲಾಡಿಸಿದನು, ಅಷ್ಟೆ! ಮರುದಿನದಿಂದ 'ಸನ್ಯಾಸಿಯ ಮೈಗೆ ತೆಕ್ಕೆಬಿದ್ದರೆ ಮೈ ಎಲ್ಲಾ ಬೂದಿ' ಎಂಬಂತೆ ತನ್ನ ಗತಿಯಾಗುವುದೆಂದು ವತ್ಸಲೆಯ ಮನೆಗೆ ಹೋಗುವುದನ್ನೇ ನಿಲ್ಲಿಸಿಬಿಟ್ಟನು. ಪ್ರೀತಿಸಿದ ಎಲ್ಲಾ ಹೆಂಗಸರನ್ನೂ ಕೈಬಿಡದೆ ಕಾಪಾಡುತ್ತೇನೆಂದು ಅಭಯವಚನಕೊಡುವುದು ಅವನಿಂದ ಸಾಧ್ಯವೇ? ಹಾಗೆ ಮಾಡಿದರೆ ಅವನಿಗೋಸ್ಕರ ಹೊಸ ನಂದಗೋಕುಲವೇ ಸೃಷ್ಟಿಯಾಗಬೇಕಾದೀತು.

ಹಾಗೆ ಸೃಷ್ಟಿಯಾದರೂ, ಮನೆಯಲ್ಲಿದ್ದ ರಾಣೀಸಾಹೇಬ್–ಧರ್ಮಪತ್ನಿ 'ವಸಂತಾ' ಎಲ್ಲಿ ಸುಮ್ಮನಿರುತ್ತಾಳೆ? ಗಂಡನಿಗೆ 'ಕ್ವಿಟ್ ಹೋಮ್' ಪಾಲಿಸಿ––ಜಾರಿಗೆ ತಂದರೆ! ಅಥವಾ ಲತ್ತೆಕೊಟ್ಟರೆ! ಹೆಂಡತಿಯು ಅಂತಹ ಗಯ್ಯಾಳಿಯೂ ಅಹುದು, ತ್ರಿಲೋಕ ಸುಂದರಿಯೂ ಅಹುದು. ಆದುದರಿಂದ ಇನ್ನು ವತ್ಸಲೆಯ ಸಹವಾಸವೇ ಬೇಡವೆಂದು ಮೆತ್ತಗೆ ಸುಣುಚಿಕೊಂಡನು.

ವತ್ಸಲಾ ಹಡೆದಳು. ಹೆಣ್ಣುಮಗು! ತಾಯಿಯಂತೆ ಬೆಳ್ಳಗಿರುವ ಮೊಸರಿನಿಂದ ತೇಲಿಬಂದ ಬೆಣ್ಣೆ ಮುದ್ದೆಯಾಗಿತ್ತು. ಗೀತಾ ಎಂದು ಹೆಸರಿಟ್ಟರು ತಮ್ಮನು ಅಷ್ಟು ದೊಡ್ಡ ಹುದ್ದೆಯಲ್ಲಿದ್ದರೂ ಎಂಟೆಂಟು ದಿನಗಳಿಗೊಮ್ಮೆ ಅಕ್ಕನಿದ್ದಲ್ಲಿಗೆ ಬಂದು ಅವಳ ಯೋಗಕ್ಷೇಮವನ್ನು ವಿಚಾರಿಸಿಕೊಂಡು, ಬೇಕಾದ ಸಹಾಯವನ್ನು ಕೊಟ್ಟು, ತನ್ನ ಬಂಗಲೆಗೆ ಮರಳುತ್ತಿದ್ದನು. ತನಗೆ ಮದುವೆಯಾಗಿ ಮೂರು–ನಾಲ್ಕು ವರ್ಷವಾದರೂ, ಪ್ರೇಮಲತೆಯಲ್ಲಿ ಮನೆಯನ್ನು ಬೆಳಗುವ ನಂದಾದೀಪವನ್ನು ಪಡೆಯದಿರು ವುದರಿಂದ, ಅಕ್ಕನ ಮಗಳು 'ಗೀತಾ' ಎಂದರೆ ಆತನ ಕರುಳೇ ವಾತ್ಸಲ್ಯ ದಿಂದ ಕಿತ್ತುಕೊಂಡು ಬರುತ್ತಿತ್ತು. ಗೀತಾ ಬೆಳೆದು ದೊಡ್ಡವಳಾಗುತ್ತಾ ಬಂದಹಾಗೆ ಅಜ್ಜಿ ಅನಸೂಯಾ ಕೊರಗುತ್ತಾ ಹಾಸಿಗೆ ಹಿಡಿದೂ ಮನೋರೋಗದಿಂದ, ಒಂದು ದಿನ ಪರಲೋಕವನ್ನು ಸೇರಿದಳು. ಕೃಷ್ಣ ರಾಯರ ಮನೆತನದಲ್ಲಿ ಏಕನಾಥ–ವತ್ಸಲೆ: ಪ್ರೇಮದ ಎರಡು ಕಳಿತ ಫಲಗಳು ಕಟ್ಟಕಡೆಯುವರೆಗೂ ಅನ್ಯೋನ್ಯವಾಗಿದ್ದು ತಾಯಿತಂದೆಯರ ಪಯಣದ ಹಾದಿಯಲ್ಲಿ ಸುಖಪ್ರಯಾಣವನ್ನು ಬಯಸಿ, ಅವರ ಆತ್ಮಗಳಿಗೆ ಚಿರಶಾಂತಿಯನ್ನು ಕೋರಿದರು. ಏಕನಾಥ–ವತ್ಸಲೆ ಧನ್ಯರು! ಏಕನಾಥನು ಅಕ್ಕನನ್ನೂ ಗೀತೆಯನ್ನೂ ತನ್ನ ಮನೆಯಲ್ಲೇ ಇರಿಸಿಕೊಂಡನು. ಏಕನಾಥನ ಜೀವನ ರಥಕ್ಕೆ ವತ್ಸಲೆ ಸಾರಥಿ! ಅವನಿಗೆ ಹಿರಿಯಳಾದ ಅಕ್ಕನಲ್ಲಿ ಎಣೆ ಯಿಲ್ಲದ ಗೌರವಾದರಗಳು! ಅವಳೇ ಅವನ ಆಲೋಚನೆಗೆ ಮಂತ್ರಿ ಯಾಗಿದ್ದಳು. ಪ್ರೇಮಲತೆಗೆ ಇದು ಸರಿಬೀಳಲಿಲ್ಲ. ಅಲ್ಲಿ ಇಲ್ಲಿ ತಿರುಗಿ ಯಾರಸಹವಾಸವನ್ನೋಮಾಡಿ, ಗೀತೆಯನ್ನು ಸಂಪಾದಿಸಿದ ಈ ಸೀತಾ

ಪತಿವ್ರತೆ........ನನ್ನ ಮನೆಯಲ್ಲಿ ಆಧಿಪತ್ಯನಡೆಯಿಸುವುದೇ? ನನ್ನ ಗಂಡನಿಗೆ ಬುದ್ಧಿ ಹೇಳುವುದೇ? ಅದೂಕೂಡ ನನ್ನಂತಹ ಸುಶಿಕ್ಷಿತ ಮಹಿಳೆಯನ್ನು ಕಡೆಗೆಣಿಸಿ........ಆಗದು! ಇದು ಸರ್ವಥಾ ಆಗದು. ಈ ತಾಯಿ—ಮಗಳು ಗೀತಾ—ಇವರಿಬ್ಬರನ್ನೂ ಮನೆಯಿಂದ ಹೊರಗೆ ಹೊರಡಿಸಲೇಬೇಕು. ಅವಳು ಯಜಮಾನರಿಗೆ ಅಕ್ಕನಾದರೆ ನನಗಲ್ಲವಲ್ಲ! ನನ್ನ ಗಂಡನಿಗೇನೇನು ದುರಾಲೋಚನೆ ಹುಟ್ಟಿಸುತ್ತಾಳೋ........ಈ ಗಂಡನಿಲ್ಲದ ಗರತಿ........ಎಂದು ತನ್ನೊಳಗೇ ಮತ್ಸರಪಟ್ಟಳು. ಹೆಂಗಸರು ಎಷ್ಟೇ ಒಳ್ಳೆಯವರಾದರೂ, ತಮ್ಮ ಗಂಡಂದಿರ ಮೇಲೆ ತಮ್ಮ ಆಧಿಪತ್ಯ ನಡೆಯದಾಗ, ತಮ್ಮ ಗಂಡಂದಿರು ತಮ್ಮೆದುರಿಗೆ ಬೇರೆಯ ಹೆಂಗಸರ ಅಂದಚೆಂದವನ್ನು ಬಣ್ಣಿಸಿದಾಗ, ಅವರು ತಮ್ಮ 'ನಾರೀ' ಗುಣವನ್ನು ತ್ಯಜಿಸಿ ಮಾರಿಗಳಾಗುವುದು ಲೋಕದ ಒಂದು ನಿತ್ಯನಿಯಮವಷ್ಟೆ! ಪ್ರೇಮಲತೆ ತನ್ನ ಗಂಡನನ್ನು ಸಾಧ್ಯವಾದಷ್ಟುರಮಟ್ಟಿಗೆ ತನ್ನ ಹತೋಟಿಯಲ್ಲಿಟ್ಟುಕೊಂಡಿದ್ದಳು. ಏಕನಾಥನಿಗೂ ಹೆಂಡತಿಯೆಂದರೆ ಪಂಚಪ್ರಾಣ! ಅವಳೇ ಅವನಿಗೆ ಪ್ರಾಣಪದಕ! ಅಕ್ಕ ಮನೆಗೆ ಬಂದಾಗ ಪ್ರೇಮಲತೆ ಅನ್ಯಥಾ ಭಾವಿಸುವುದು ಸ್ವಾಭಾವಿಕವಾದುದೇ ವಾಸ್ತವಿಕವಾಗಿ ವತ್ಸಲೆ ಅಂತಹ ಹೆಂಗಸಲ್ಲ. ಗೀತೆಯನ್ನು ನೋಡಿದರೆ ಪ್ರೇಮಲತೆಯು ಉರಿದು ಕೆಂಡವಾಗುತ್ತಿದ್ದಳು. ಗಂಡನು ಯಾವಾಗಲೂ ಫ್ಯಾನ್ಸಿ ಸೀರೆ, ಲಂಗ, ಆರ್ನಮೆಂಟ್ಸ್.......ಮುಂತಾದ ಸಾಮಾನುಗಳನ್ನು ಗೀತೆಗೆ ತಂದುಕೊಡುವುದು, ಅವಳನ್ನು ಕಾರಿನಲ್ಲಿ ವಾಕಿಂಗ್ ಕರೆದುಕೊಂಡುಹೋಗುವುದು, ವತ್ಸಲೆಯನ್ನೂ ಅತ್ಯಂತ ಸುಖದಿಂದಿಟ್ಟಿರುವುದು........ಇವನ್ನೆಲ್ಲಾ ನೋಡಿ ಪ್ರೇಮಲತೆ ಹೇಗೆ ಸಹಿಸಿಯಾಳು? ಮನೆಯ ಕೆಲಸಗಳನ್ನು ಮಾಡಲು ಹೊರಗೆ ಆಳುಗಳಿದ್ದರೂ, ಒಳಗೆ ಒಲೆಯಮುಂದೆ ಹಗಲೂ ಇರುಳೂ ಒಂದೇಸಮನೆ ತಾನೇ ಕುಳ್ಳಿರಬೇಕೆನಿಸಿದಾಗ ಪ್ರೇಮಲತೆಗೆ ಅಸಹ್ಯ ಯಾತನೆಯಾಗುತ್ತಿತ್ತು. ಅಕ್ಕ ಮನೆಯ ಕೆಲಸ ಮಾಡುತ್ತೇನೆಂದರೆ ಏಕನಾಥನು ನಿರಾಕರಿಸುತ್ತಿದ್ದನು. ತನ್ನ ಹೆಂಡತಿ........ಬಣ್ಣದ ಬೀಸಣಿಗೆಯೇ........ಬಾಡದಹೂವೇ ಬೆಂಕೆಯೆದುರಿಗೆ ಕುಳಿತು ಕಮರಿ ಕಷ್ಟಪಟ್ಟು ಕೆಲಸಮಾಡಿ........ಪಳಗಿದ ಆನೆಯಂತಾಗಲಿ! ಬಿಂಕಬಿನ್ನಾಣ ಬಿಡಲಿ....

....ಎಂದು ಏಕನಾಥನ ಮುಂದಾಲೋಚನೆ! ಒಂದು ಸಲ ಒಲೆಯ ಮುಂದೆ ಕುಳಿತು ನಾಲ್ಕು ಬಾಕ್ರಿ ತಟ್ಟುವುದರೊಳಗೆ, ನಾಲ್ಕು ಕಪ್ ಟೀ ಫ಼ಾಡುವುದರೊಳಗೆ ಪ್ರೇಮಲತೆ ಬಾಡಿದ ಲತೆಯಾಗಿಬಿಡುತ್ತಿದ್ದಳು. ಅಷ್ಟು ಸೂಕ್ಷ್ಮಶರೀರ ಅವಳದು. ಆಗ ಅವಳ ಅಬ್ಬರವೂ ಕಡಿಮೆ. ಶ್ರೀಮಂತರ ಮನೆಗೆ ಮದುವೆಯಾದರೆ ಗುಲಾಬಿಯ ಹಾಸಿಗೆಯಲ್ಲೇ, ಮಲಗಬಹುದೆಂಬ ಸವಿಕಲ್ಪನೆಯ ಹೆಂಗಳೆಯರೂ ಹಲವರಿದ್ದಾರೆ. ಅವರಿಗೆಲ್ಲಾ ಏಕನಾಥನಂತಹ ಗಂಡಂದಿರು ಸಿಕ್ಕಿದರೆ ಅವರ ಆಸೆ 'ಗಗನದ ಕುಸುಮ' ಮುಡಿದಂತೆಯೇ ಆಗುವುದರಲ್ಲಿ ಸಂದೇಹವಿಲ್ಲ. ಏಕನಾಥನು ಹೆಂಡತಿಯ ತಾಳಕ್ಕೆ ಕುಣಿದು. ಅವಳ ಮಾತನ್ನೇ ವೇದವಾಕ್ಯವೆಂದು ಬಗೆದು, ಅಕ್ಕನಲ್ಲಿ ಮನೋವೈಷಮ್ಯ ಬೆಳೆಯಿಸುವಷ್ಟು ಅವಿವೇಕಿಯೂ ಅಲ್ಲವಾಗಿದ್ದನು. ಅವನ ಕೋಪ ಹೆಚ್ಚಾದರೆ, ಸಮಯಬಂದರೆ ಪ್ರೇಮಲತೆಗೇ ನಾಲ್ಕು ಏಟು ಬೀಳುತ್ತಿತ್ತು ವಿನಾ ವತ್ಸಲೆಗೂ ಗೀತೆಗೂ ಏನು ಆಗುತ್ತಿರಲಿಲ್ಲ. ಅವನೂ ಅಕ್ಕನೂ ಅಷ್ಟು ಅನ್ಯೋನ್ಯವಾಗಿ ಚಿಕ್ಕಂದಿನಿಂದ ಬೆಳೆದುಕೊಂಡು ಬಂದವರು. ಅವಳ ಭಾಗ್ಯಕ್ಕಾದರೂ ಏನುಕಡಿಮೆಯಾಗಿತ್ತು? ಮದುವೆಯಾದ ಗಂಡನಿಂದ ಹೆಂಡತಿಯ ಬೆಲೆ ತಿಳಿಯಲಿಕ್ಕಾಗಲಿಲ್ಲ. ಎಣೆಯಿಲ್ಲದಷ್ಟು ಸೌಂದರ್ಯ! ಸೌಜನ್ಯ ಸೌಶೀಲ್ಯಗಳ ಮೂರ್ತಿ ವತ್ಸಲೆ! ಇಂತಹ ಅಕ್ಕ ........ಏನೋ ಅಡ್ಡದಾರಿಯನ್ನು ತುಳಿದುಬಿಟ್ಟಳು. ತನ್ನ ರೂಪ ತನಗೆ ಮೃತ್ಯುವೆಂದು ಅವಳಿಗೆ ಹೇಗೆ ತಿಳಿಯಬೇಕು? ರಾಜಗೋಪಾಲನು ಬೀಸಿದ ಬಲೆಯಲ್ಲಿ ಬಹಳ ಸುಲಭವಾಗಿ ಸಿಕ್ಕಿಕೊಂಡಳು. ಇದರಲ್ಲಿ ಏಕನಾಥ ದೋಷವನ್ನು ಕಲ್ಪಿಸಿದರೆ, ಅವನೇ ಸ್ವತಃ ನಳಿನಿಯನ್ನು ಮದುವೆಯಾಗುವುದು ಬಿಟ್ಟು, ಪ್ರೇಮಲತೆಯ ಅನುರಾಗಕ್ಕೆ ಹೇಗೆ ಬಲಿಬಿದ್ದನು? ಇದು ಆತ್ಮವಂಚನೆಯಲ್ಲವೇ? ಆಹಾ! ಗೀತೆ ಎಷ್ಟು ಮುದ್ದು? ಅಷ್ಟು ಮುದ್ದಾದ ಬೆಣ್ಣೆಯ ಮುದ್ದೆ ವತ್ಸಲೆಯಲ್ಲಿ ಜನ್ಮವೆತ್ತಿತೇ?........ಹೆಂಗಸು ಎಷ್ಟೇ ಕೆಟ್ಟವಳಾದರೂ ಲೋಕಕ್ಕೆ ಮಕ್ಕಳಂತಹ ರತ್ನಗಳನ್ನು ದಾನ ಮಾಡುವಳಲ್ಲವೇ? ಅಂತಹ ಉದಾರಬುದ್ಧಿ ಹೆಂಗಸರು ಮಾತ್ರ ಪಡೆದು ಬಂದಿದ್ದಾರೆ. ಒಂಬತ್ತು ತಿಂಗಳವರೆಗೆ ಭಾರವಾದ ಗರ್ಭವನ್ನು ಧರಿಸಿ, ಮಕ್ಕಳನ್ನು ಹಡೆದು, ಸಾಕಿ ಸಲಹಿ, ದೊಡ್ಡವರನ್ನಾಗಿ ಮಾಡುವ ತಾಯಿ-

ಹೆಂಗಸು! ಇದಕ್ಕಿಂತ ಹಿರಿಮೆ, ಉದಾರ ಬುದ್ಧಿಯನ್ನು ಗಂಡಸರು ತೋರುವರೇ?

ಒಂದು ದಿನ ಗೀತಾ ತಿಳಿಯದ ಪ್ರೇಮಲತೆಗೆ ಸೇರಿದ್ದ ಟಾಯ್‌ಲೆಟ್ ಬಾಕ್ಸಿನಲ್ಲಿದ್ದ 'ಕುಟಕುರಾ' ಪೌಡರ್ ಚೆಲ್ಲಿದಳು. ಪ್ರೇಮಲತೆಗೆ ಕೋಪ ತಡೆಯುವುದಾಗಲಿಲ್ಲ. ಮಗುವಿನ ಎರಡೂ ಹಾಲುಗಲ್ಲದ ಕೆನ್ನೆಗಳ ಮೇಲೆ ಛಳಾರನೆ ಏಟುಕೊಟ್ಟಳು. ಮಗು ಎಚ್ಚರದಪ್ಪಿ ಬಿದ್ದುಬಿಟ್ಟಿತು. ತಾಯಿ ವತ್ಸಲೆ 'ಕೂಡಲೇ ಓಡಿಬಂದು, ತಲೆಗೆ ತಣ್ಣೀರೆರಚಿದಳು. ಮಗುವಿಗೆ ಎಚ್ಚರವಾಯಿತು. ಆಗಲೂ ವತ್ಸಲೆ ಸುಮ್ಮನಿದ್ದುಬಿಟ್ಟಳು'. ಏಕನಾಥನೇ ಮನೆಗೆ ಬಂದಾಗ ಗೀತೆಯ 'ತೊದಲು ನುಡಿಗಳನ್ನು ಕೇಳಿ, ಅವನೇ ಎಲ್ಲಾ ವಿಷಯಗಳನ್ನು ತಿಳಿದುಕೊಂಡನು'. ಹೆಂಡತಿಯ ಅವಿವೇಕದ ಕೆಲಸವನ್ನು ಕೇಳಿ ಅಸಾಧಾರಣ ಪಶ್ಚಾತ್ತಾಪಪಟ್ಟನು. ತಾಯಿಯ ಕರುಳು.... ....ಗೀತೆಗೆ ಪೆಟ್ಟುಬಿದ್ದಾಗ ವತ್ಸಲೆಗೆಷ್ಟು ಕರುಳು ಹಿಸುಕಿರಲಿಕ್ಕಿಲ್ಲ........ ಆದರೆ ಪ್ರೇಮಲತೆಗೆ ದುಃಖ ಆಗಲಿಲ್ಲವಲ್ಲ! ಅವಳಿಗೆ ಪೌಡರ್ ನಷ್ಟವಾದುದೊಂದೇ ದುಃಖ. ಇದು ಮಕ್ಕಳ ಹಡೆದ ತಾಯಿ ಮತ್ತು ಬಂಜೆಯರ ತುಲನೆ! 'ಮಕ್ಕಳನ್ನು ಹೆತ್ತ ಕರುಳು ನಿನ್ನಂತಹ ಬಂಜೆಗೆಲ್ಲಿಂದ ಬರಬೇಕು? ನಿನಗೊಂದು ಮಗುವಿದ್ದಿದ್ದರೆ, ಅದನ್ನು ಯಾರಾದರೂ ಹೊಡೆದರೆ, ನಿನ್ನ ಮನೋಭಾವ ಹೇಗಿರುತ್ತಿತ್ತು? ಯೋಚಿಸಿನೋಡು, ಚಾಂಡಾಲಿನಿ, ಪಿಶಾಚಿ, ಗೀತೆಯೆಂದರೆ ಪ್ರವಾಹದಲ್ಲಿ ತೇಲಿಬಂದ ಕಸ-ಕಡ್ಡಿ ಎಂದು ತಿಳಿದಿರುವೆಯಾ?' ಎಂದು ಪ್ರೇಮಲತೆಯನ್ನು ಚೆನ್ನಾಗಿ ಥಳಿಸಿದನು. 'ಪ್ರೇಮಲತೆಯಂತೆ! ನಿನಗೆ ಇಂತಹ ಹೆಸರು ಒಪ್ಪುವುದೇ? ಇನ್ನೂ ಐದು ವರುಷದ ಆ ಹುಡುಗಿ ಪೌಡರ್ ಚೆಲ್ಲಿದರೆ ನಿನ್ನದೇನು ಗಂಟು ಹೋಯಿತು. ಬೇಡ, ಇಂದಿನಿಂದ ಪೌಡರ್, ಸ್ನೋ ಎಲ್ಲವನ್ನೂ ತಿಪ್ಪೇಗುಂಡಿಗೆ ಎಸೆದುಬಿಡು. ದೇವರುಕೊಟ್ಟ ಸ್ವಾಭಾವಿಕ ಸೌಂದರ್ಯವೇ ಸಾಕು. ಪೌಡರ್ ಹಚ್ಚಿ, ದೇವಲೋಕದ ಅಪ್ಸರೆಯಾಗುವುದು ಬೇಡ. ಇನ್ನು ಪೌಡರ್, ಸ್ನೋ ಕಣ್ಣಿನಿಂದ ನೋಡಿದರೆ, ನಿನ್ನಗತಿ ತೀರಿಸಿಬಿಡುವೆನೆಂದು' ಹೇಳಿ, ಅವಳನ್ನು ಹಂಗಿಸಿದನು. ಪ್ರೇಮಲತೆಯ ಮುಖ ಸುಟ್ಟ ಬದನೆಕಾಯಿಯಂತಾಯಿತು.

ಗೀತೆಯನ್ನು ಹಡೆದಂದಿನಿಂದ ವತ್ಸಲೆಯ ಪ್ರಕೃತಿ ದಿನೇ ದಿನೇ ಕೆಡುತ್ತಾ ಇದ್ದಿತು. ದೇಹ ಕೃಶವಾಗುತ್ತಾ ಬಂತು. ಆಗಾಗ ಅವಳು ಡ್ಯಾನ್ಸ್‌ಮಾಡಿದಾಗ, ತೆಗೆದ ಭಾವಚಿತ್ರಗಳು (poses). ಗೀತೆಯನ್ನು ಕೈಯಲ್ಲಿ ಹಿಡಿದು, ಎತ್ತಿಕೊಂಡು, ಸೊಂಟದವರೆಗೆ ಹೆಳಲನ್ನು ತೂಗಾಡಿಸುತ್ತಾ ಏನನ್ನೋ ನೋಡಿ ನಗುವುದು. ವೋಯಿಲ್ ಸೀರೆ ಅವಳನ್ನೇ ಮೆಚ್ಚಿರುವಂತೆ, ಅದನ್ನೇ ಉಟ್ಟು ಅಲಂಕಾರಮಾಡಿಕೊಂಡು ನಿಂತಿದ್ದ ಮುದ್ದಾದ ಮುಖದ ವತ್ಸಲೆ........ನೀಳಾದ ದೇಹದ ಚೆಲುವೆ.... ....ಹಿಂದಿನ ಭಾವಚಿತ್ರಗಳನ್ನು ನೋಡಿ ತನ್ನನ್ನು ತಾನೇ ನಂಬದಾದಳು. ತಮ್ಮ, ತಮ್ಮನ ಹೆಂಡತಿ ಮತ್ತು ತಾನು ಗೀತೆಯನ್ನು ರೌಂಡ್‌ಟೇಬ್ಲ್ ಮೇಲೆ ಕೂಡ್ರಿಸಿ, ಫೋಟೋತೆಗೆಯಿಸಿಕೊಂಡ........ಹಿಂದಿನ ಚಿಗುರಿನ ಚಿತ್ರಗಳು ಪುನಃ ವತ್ಸಲೆಯ ಕಣ್ಣೆದುರಿಗೆ ಬಂದು ನಿಂತಿದ್ದವು. ಅಷ್ಟು ಭಾವನಾಮಯವಾಗಿ ತೇಲಿದಳು ವತ್ಸಲೆ!

ಒಂದು ದಿನ ಏಕನಾಥನು ಗೀತೆಯನ್ನು ಕರೆದುಕೊಂಡು ಸಿನೇಮಾಕ್ಕೆ ಹೋಗಿದ್ದನು. ಅವನ ಹತ್ತಿರವೇ ಒಬ್ಬಳು ಯುವತಿಯು ಕುಳಿತಿದ್ದಳು. ಆ ಯುವತಿ ತನ್ನ ಕಡೆಗೇ ನೆಟ್ಟದೃಷ್ಟಿಯಿಂದ ನೋಡುತ್ತಿರುವುದನ್ನು ನೋಡಿ, ಆತನಿಗೆ ಆಶ್ಚರ್ಯವಾಯಿತು. ಅವಳು ಬೇರಾರೂ ಇರದೆ, ಶಂಕರರಾಯರ ಮಗಳಾದ ನಳಿನಿಯಾಗಿದ್ದಳು. ನಳಿನಿ ಇಷ್ಟು ಸುಂದರಿ ಇರುವಳೇ? ಅಯ್ಯೋ! ಹೆಣ್ಣು ಮಕ್ಕಳು ಹೇಗೆ ಬೆಳೆಯುತ್ತಾರೆ! ಆಗ ನಾನು ಬೇಡವೆಂದುಬಿಟ್ಟೆ. ಈಗ ಕಣ್ಣು ಫಿಲ್ಮ್ ಸ್ಕ್ರೀನಿನ ಮೇಲಿದ್ದರೂ ಮನಸ್ಸು ಮಾತ್ರ ನಳಿನಿಯ ಎಕ್ಸ್‌ರೇ ಫೋಟೋ ತೆಗೆಯುತ್ತದಲ್ಲಾ: ಏನುಮಾಡಲಿ? ಎಂದು ಮನಸ್ಸಿನಲ್ಲಿಯೇ ತಳಮಳಿಸಿದನು. ಗಂಡನ ಈ ನಡತೆಯನ್ನು ನೋಡಿ ಹೆಂಡತಿ ಪ್ರೇಮಾ ಮೆಲ್ಲಗೆ ಆತನನ್ನು ಚಿವುಟಿದಳು. ಅಂತೂ ಸಿನೇಮಾ ನೋಡಿ ಮನೆಗೆ ಮರಳುವಾಗ 'ನಳಿನಿ'ಯ ಜಪಮಾಡುತ್ತಾ ಬರುತ್ತಿದ್ದನು ಏಕನಾಥನು.

ಈಗಲೋ ಇನ್ನೊಂದು ಗಳಿಗೆಯೋ ಎಂಬಂತಿದ್ದುದರಿಂದ, ವತ್ಸಲೆಯು ತಮ್ಮನನ್ನು ಹತ್ತಿರಕ್ಕೆ ಕರೆದು, ಈ ಗೀತೆಯನ್ನು ನಿನಗೆ ಒಪ್ಪಿಸಿರುತ್ತೇನೆ. ಇವಳ ಅಭ್ಯುದಯವು ನಿನ್ನನ್ನು ಅವಲಂಬಿಸಿದೆ. ಅಕ್ಕನೆಂದು ನನ್ನನ್ನು

ಹೇಗೆ ಪ್ರೀತಿಸುತ್ತೀಯೋ ಹಾಗೆಯೇ ಅವಳನ್ನು ಪ್ರೀತಿಸು. ನನಗೆ ಇನ್ನು ಹೆಚ್ಚುಕಾಲ ನಿಲ್ಲುವಷ್ಟು ಅವಕಾಶವಿಲ್ಲ. ತಮ್ಮಾ, ನಿನ್ನ ಹೆಂಡತಿಯನ್ನು ಬಹಳ ಪ್ರೀತಿಯಿಂದ ಕಾಣು. ಹೆಂಗಸರಲ್ಲಿ ಗೌರವವನ್ನಿಡು. ಪರಸ್ತ್ರೀಯರನ್ನು ಪೂಜ್ಯಭಾವದಿಂದ ನೋಡು. ನನ್ನ ಜೀವನಯಾತ್ರೆ ಕೊನೆಗೊಳ್ಳುತ್ತಾ ಇದೆ. ತಮ್ಮಾ, ಹೋಗಿಬರುವೆ. ಗೀತಾ, ನನ್ನ ಕಂದಮ್ಮಾ, ಸುಖದಿಂದ ಬಾಳಮ್ಮಾ, ನಾನು ಮತ್ತೆ ಬರುತ್ತೇನೆಂದು........ವತ್ಸಲೆಯು ಮೃತ್ಯುದೇವತೆಯಿಂದ ಬಂದ ಆಹ್ವಾನವನ್ನು ಸ್ವೀಕರಿಸಿ, ಪರಲೋಕಕ್ಕೆ ಪಯಣಬೆಳೆಸಿದಳು. ಏಕನಾಥನಿಗಾದ ದುಃಖವೆಷ್ಟೆಂದು ಯಾವ ಅಳತೆಗೋಲಿನಿಂದಲೂ ಅಳೆಯುವುದು ಸಾಧ್ಯವಲ್ಲದ ಕಾರ್ಯ. ಇಡೀ ಪ್ರಪಂಚವೇ ನಾಶವಾದರೂ ಅವನಿಗೆ ಅದೇನೂ ಮಹಾನಷ್ಟವೆಂದು ತೋರದು. ಆದರೆ ಅಕ್ಕನ ಮರಣದಿಂದ ತುಂಬಿ ಬಾರದ ಹಾನಿಯಾಯಿತೆಂದೇ ಅವನ ಅಭಿಪ್ರಾಯ! ನಮಗೆ ಈ ಪ್ರಪಂಚದಲ್ಲಿ ಅಕ್ಕ–ತಂಗಿ, ಗಂಡ–ಹೆಂಡತಿ, ತಾಯಿ–ತಂದೆ ಮೊದಲಾದ ಮಾಯಾಮೋಹವನ್ನು ತಂದೊಡ್ಡಿ ಕುಣಿಸುವ ಆ ಪರಮಾತ್ಮನ ಲೀಲೆಗೆ ಲೀಲೆಯೆಂದು ಕರೆಯಲು ಮನಸ್ಸು ಎಂದಾದರೂ ಒಪ್ಪೀತೇ? ಈ ಜನ್ಮದಲ್ಲಿ ಕಳೆದುಕೊಂಡ ಅಂತಹ ಸುಗುಣೆಯಾದ ಅಕ್ಕನನ್ನು ಇನ್ನೊಂದು ಜನ್ಮದಲ್ಲಿ ಪಡೆಯಲು ಏನು ಸಾಧಾರವಾದ ನಿದರ್ಶನ ಇದೆ? ಏಕನಾಥನು ಮಗುವಿಗಿಂತ ಮಗುವಾಗಿ ಅತ್ತನು. ಗೀತೆಯನ್ನು ತನ್ನ ಎದೆಗೆ ಅವಚಿಕೊಂಡು ಹಲುಬಿದನು. ಆ ದಿನ ಮತ್ತು ಎರಡು ಮೂರು ದಿನಗಳವರೆಗೆ ಪ್ರೇಮಲತೆಗೆ ಗಂಡನನ್ನು ಮಾತನಾಡಿಸಲು ಧೈರ್ಯಸಾಲದು. ಅಕ್ಕನ ಮುಖವನ್ನೇ ಹರಿದುಹಚ್ಚಿಕೊಂಡು ಹುಟ್ಟಿದ ಗೀತೆಯೊಬ್ಬಳನ್ನು ನೋಡಿ ಏಕನಾಥನ ಮನಸ್ಸು ತಣಿಯುತ್ತಿತ್ತು.

ಅಂದಿನಿಂದ ಗೀತೆ ಏಕನಾಥ–ಪ್ರೇಮಲತೆಯರ ಮಗಳಾಗಿ ಪರಿಣಮಿಸಿದಳು. ತಮ್ಮ ಹೊಟ್ಟೆಯಲ್ಲಿ ಮಕ್ಕಳು ಹುಟ್ಟದೇ ಇರುವವರಿಗೆ ಗೀತೆಯೊಬ್ಬಳು ಆದರದ ವಸ್ತುವಾಗದೆ ಹೋಗುವಳೇ? ಮಕ್ಕಳಿಲ್ಲದವರು ಏನು ಮಾಡಿಯಾರು ಮತ್ತೆ? ಗೀತೆಯೂ ಅಂತಹ ಅಪೂರ್ವವಾದ ವಸ್ತುವೆನ್ನುವುದು ಅತಿಶಯೋಕ್ತಿಯಾಗಲಾರದು. ಸಾಧಾರಣವಾಗಿ 'ಫಿಲ್ಮ್ ಇಂಡಿಯಾ' ಮುಂತಾದ ಯಾವ ಮಾಸಪತ್ರಿಕೆಗಳಲ್ಲೂ ಯಾವ ಸಿನೇಮಾ ತಾರೆಯರೂ

ಗೀತೆಯಷ್ಟು ರೂಪವತಿಯರಿರಲಾರರು! ಅಷ್ಟು 'ಲಲಿತಕಲಾಮಯ ಲಾವಣ್ಯ ನಿಲಯ'ಕ್ಕೆ ಅಧಿದೇವತೆಯಾದ ಗೀತೆಯನ್ನು ತಮ್ಮನಿಗೆ ಅರ್ಪಿಸಿ ಹೋದ ವತ್ಸಲೆ ಧನ್ಯಳಲ್ಲವೇ? ಪ್ರೇಮಲತೆ........ಪೌಡರ್ ಚೆಲ್ಲಿದಾಗ ಹೊಡೆದ ಅದೇ ಪ್ರೇಮಲತೆ ಗೀತೆಯೆಂದರೆ 'ಮಧುರಾದಪಿ ಮಧುರತರಂ' ಎಂಬಂತೆ ಜೀವದ ಉಸಿರಾದಳು. ಹೀಗೆ ಗೀತೆ ಮಾವ-ಅತ್ತೆಯರ ಆಶ್ರಯದ-ವಾತ್ಸಲ್ಯದ ನೆರಳಿನಲ್ಲಿ ಬೆಳೆಯುತ್ತಾ ಬಂದಳು.

ಜೀವನಪ್ರವಾಹದಲ್ಲಿ ತೇಲಿ ತೇಲಿ ಏಕನಾಥನು ಎಲ್ಲಿಂದ ಎಲ್ಲಿಗೆ ಬಂದನು? ವತ್ಸಲೆಯ ಅಂತಿಮ ಸ್ಥಿತಿಯೇನು? ಇವೆಲ್ಲವನ್ನೂ ಸೂಕ್ಷ್ಮವಾಗಿ ಯೋಚಿಸಿದರೆ, ಬದುಕುವುದೂ ಒಂದು ಕಲೆ, ಜೀವನವೂ ಒಂದು ಅಗಾಧವಾದ ವಿದ್ಯೆ, ಈ ಪ್ರಪಂಚವೂ ಒಂದು ದೊಡ್ಡ ವಿಜ್ಞಾನಶಾಲೆಯೆಂದು ಎಲ್ಲರಿಗೂ ಭಾಸವಾಗುವುದಿಲ್ಲವೆ? ಈಜಿದಷ್ಟಕ್ಕೂ ಜೀವನ ಸಾಗರದ ನೆಲೆಯನ್ನು ಕಾಣುವುದು ಅಸಾಧ್ಯವೆಂದು ಏಕನಾಥ-ವತ್ಸಲೆಯರಿಂದ ಮನಗಾಣಬಹುದಲ್ಲವೇ?

ಗೀತೆ ಮೈತುಂಬಿಕೊಂಡು ಬೆಳೆಯುತ್ತಾ ಬಂದಳು. ಅವಳು ಸ್ಕೂಲಿಗೆ ಹೋಗುವಾಗ-ಅಲ್ಲಿ ಇಲ್ಲಿ ಹಾದುಹೋಗುವಾಗ ರಾಜಗೋಪಾಲನು ಅವಳನ್ನು ನೋಡಿ ತಲೆತಗ್ಗಿಸುತ್ತಿದ್ದನು. ಅಯ್ಯೋ! ನಾನು ಎಂತಹ ಅನ್ಯಾಯ ಮಾಡಿದೆ! ವತ್ಸಲೆಯು ಅಂದು ನನ್ನನ್ನು ನೋಡಿದಾಗ, ತಾನು ಗರ್ಭಿಣಿ ಇದ್ದೇನೆಂದೂ ಪ್ರೇಮವು ಶಾಶ್ವತವಾಗಿರಬೇಕೆಂದೂ ತನ್ನನ್ನು ಕೈ ಬಿಡಕೂಡದೆಂದೂ ಹೇಳುವಾಗ ಆ ಕಾತರನಯನಗಳು........ಏನನ್ನು ಸೂಚಿಸಿದ್ದವು? ಮೊದಮೊದಲು ಪ್ರೇಮದ ಹೆಸರಿನಲ್ಲಿ ಚೆಲ್ಲಾಟವಾಡಿದೆ. ಅವಳನ್ನು ಕಾಮೋಪಭೋಗದ ವಸ್ತುವನ್ನಾಗಿ ಉಪಯೋಗಿಸಿಕೊಂಡೆ. ಅವಳಿರುವಲ್ಲಿಗೆ ನಾನು ಆಗಾಗ ಹೋಗುತ್ತಾ ಇದ್ದು, ಅವಳಿಗೆ ಒಂದು ತರದ ಅಭಯವನ್ನು ಕೊಟ್ಟದ್ದರೆ, ಆ ಅನ್ಯವಸ್ತು ನನ್ನದೆಂದು, ಒಂದೇಕರುಳಿನ ಎರಡು ಬಳ್ಳಿಗಳೆಂದು ತಿಳಿದಿದ್ದರೆ........ನನ್ನಲ್ಲಿ ಮನುಷ್ಯತ್ವ ಉಳಿಯುತ್ತಿತ್ತು. ಈ ಹುಡುಗಿ ಗೀತೆ........ಆ ಗೀತಾಮಾತೆ ವತ್ಸಲಾ........ಛೀ! ನಾನು ಪಾಪಿ! ಕಾಮುಕ........ಆ ಹುಡುಗಿ ಗೀತೆಯೊಡನಾದರೂ ಅವಳ ಜನ್ಮಕಥೆ

ಯನ್ನು ಯಾವ ನಾಲಗೆಯಿಂದ ಹೇಳಲಿ? ನನ್ನಂತಹ ಜನರಿದ್ದರೆ ಈ ಭೂಮಿಯ ಭಾರವಿನ್ನೂ ಹೆಚ್ಚಾಗುವುದರಲ್ಲಿ ಸಂಶಯವಿಲ್ಲ. ನಾನು ಮಾಡಿದ ತಪ್ಪನ್ನು ಕ್ಷಮಿಸೆಂದು ಏಕನಾಥನನ್ನು ಕೇಳಿಕೊಳ್ಳಲೇಬೇಕು, ಆ ಗೀತೆ........ಕರುಳು ಬಳ್ಳಿಯನ್ನು ಎತ್ತಿ, ಪಟ ಪಟನೆ ಮುದ್ದಾಡಿ, ತಾನು ಅವಳಿಗೆ ಜನ್ಮದಾತನೆಂಬ ಅರಿವನ್ನು ಅವಳಿಗೆ ತಂದುಕೊಡಬೇಕೆಂದು ನೇರವಾಗಿ 'ಪ್ರೇಮನಿವಾಸ ಅಥವಾ ಮಾಲತಿವಿಲ್ಲಾ'—ಬಂಗಲೆಗೆ ಹೋದನು. ಹೋದವನೇ ಏಕನಾಥನ ಕಾಲುಗಳನ್ನು ಗಟ್ಟಿಯಾಗಿ ಹಿಡಿದು ಕೊಂಡು ರಾಜಗೋಪಾಲನು ಗಳಗಳ ಅತ್ತುಬಿಟ್ಟನು. ಏಕನಾಥನು ರಾಜಗೋಪಾಲನ ಹತ್ತಿರ ಸ್ವಾಮಿ, ನೀವು ನನ್ನಿಂದ ಕ್ಷಮಾಯಾಚನೆ ಯನ್ನು ಕೇಳುವುನೇ ಅನುಚಿತ. ಬಹುಮಟ್ಟಿಗೆ ಜನರು ಅವರವರ ಅದೃಷ್ಟ ದುರಾದೃಷ್ಟಗಳಿಗೆ ಹೊಣೆಯೇ ಹೊರತು ಯಾರೂ ಬೇಕೆಂದೇ ತಪ್ಪು ಕೆಲಸಗಳನ್ನು ಮಾಡುವುದಿಲ್ಲ. ಇದರೊಡನೆ ಅಜ್ಞಾನವೂ ಒಂದು ದೋಷ ವೆನ್ನೋಣ. ನಮ್ಮ ಅಕ್ಕನಿಗೂ ನಿಮಗೂ ಮೈತ್ರಿಯು ಬೆಳೆದದ್ದೂ ಯೋಗಾಯೋಗ ಬಲದಿಂದಲೇ. ನಿಮ್ಮಂತಹ ನೃತ್ಯಕಲಾವಿದರು ....... ನೃತ್ಯಶಾಸ್ತ್ರವಿಶಾರದರು........ಇನ್ನೊಬ್ಬರಿಲ್ಲವೆಂದೇ ನಮ್ಮ ಅಕ್ಕ ನಿಮ್ಮಿಂದ ಆಶ್ರಯಪಡೆಯಲು ಬಯಸಿದಳು. ನಿಮ್ಮ ನಿಮ್ಮೊಳಗೆ ಪ್ರೇಮ........ ಅನುರಾಗ ಬೆಳೆಯುವುದೇನೂ ಆಶ್ಚರ್ಯವಲ್ಲ. ನಿಮ್ಮಿಂದ ಯಾವುದು ತಪ್ಪೆಂದು ಕ್ಷಮಿಸಲಿ? ಎಂದು ಏಕನಾಥನು ತನ್ನ ತರುಣಸಹಜವಾದ ವಿನಯದಿಂದ ರಾಜಗೋಪಾಲನನ್ನು ಸಮಾಧಾನಪಡಿಸಿದನು. ಮತ್ತು 'ಗೀತಾದೇವಿ' ನಿನ್ನ ಮಗಳೆಂದು ಒಪ್ಪುವೆಯೋ ಹೇಗೆ? ಎಂದು ಕೇಳಿ ದನು. 'ಓಹೋ! ಧಾರಾಳವಾಗಿ........ಒಪ್ಪುವೆ'ನೆಂದನು. ಅದು ಮೊದಲಾಗಿ, ರಾಜಗೋಪಾಲನೂ ಏಕನಾಥನೂ ವಿಶ್ವಾಸವನ್ನು ಪರಸ್ಪರ ವಾಗಿ ಹೆಚ್ಚಿಗೆ ಬೆಳೆಯಿಸಿಕೊಂಡರು. ರಾಜಗೋಪಾಲನೂ ಒಳ್ಳೊಳ್ಳೆಯ ಫ್ಯಾನ್ಸಿ ಬಟ್ಟೆ, ಬೇಕುಬೇಕಾದ ಟಾಯ್‌ಲೆಟ್ಸ್.... ...ತಂದು ಮಗಳನ್ನು ವಿಧ ವಿಧದಿಂದ ಅಲಂಕಾರಮಾಡುವನು; ಪಟಪಟನೆ ಬಲವಾಗಿ ಚುಂಬಿ ಸುವನು, ಅವನ ಚುಂಬನಗಳಿಂದ ಅವಳ ಹಾಲುಗಲ್ಲಗಳು ಕೆಂಪೇರು ತ್ತಿದ್ದವು. ಮಗಳಲ್ಲಿರುವ ಅವನ ವಾತ್ಸಲ್ಯವೆಷ್ಟೆಂದು ಹೇಳೋಣ?

ಏಕನಾಥನು ಗೀತೆಯನ್ನು ಬೇಕಾದರೆ ತನ್ನ ಮನೆಗೆ ಕರೆದುಕೊಂಡು ಹೋಗಬಹುದೆಂದು ರಾಜಗೋಪಾಲನಿಗೆ ತಿಳಿಸಿದನು. ರಾಜಗೋಪಾಲನು, 'ನಾನು ತಪ್ಪನ್ನು ಕ್ಷಮಿಸೆಂದು ಅಂಜಲಿಬದ್ಧನಾಗಿ ಬಂದು, ನಿನ್ನೆದುರಿಗೆ ನಿಂತೆ. ನೀನು ಗೀತಾಂಜಲಿಯನ್ನರ್ಪಿಸಿದೆ. ಆಗಲಿ, ಅವಳು ದೊಡ್ಡವಳಾಗಿ ಅವಳ ಶಿಕ್ಷಣ ಮುಗಿಯುವವರೆಗೆ ನಿನ್ನಲ್ಲೇ ಇರಲಿ' ಎಂದು ಸಾಧಾರಣ ಅರ್ಧ ಲಕ್ಷ ಬೆಲೆಬಾಳುವಷ್ಟು ಧನಕನಕಗಳನ್ನು ಏಕನಾಥನಿಗೆ ಒಪ್ಪಿಸಿದನು. ಗೀತೆಯ ಭಾಗ್ಯ!

ಇವೆಲ್ಲವೂ ಕ್ಷಣಮಾತ್ರದಲ್ಲಿ ನಡೆದವು. ಗೀತೆಯು ಭಾಗ್ಯಲಕ್ಷ್ಮಿ! ಅವಳ ದರ್ಶನಮಾಡಿದವರಿಗೆಲ್ಲಾ ಒಂದಲ್ಲ ಒಂದು ವಿಧದ ಭಾಗ್ಯ ಬರುತ್ತಿತ್ತು! ಕೆಲವರಿಗೆ ಕಳೆದುಹೋದ ವಸ್ತುಗಳು ದೊರಕುತ್ತಿದ್ದವು. ಸ್ಕೂಲಿಗೆ ಹೋಗುವ ಹುಡುಗರು ಅವಳನ್ನು ನೋಡಿದರೆ ಪರೀಕ್ಷೆಯಲ್ಲಿ ತೇರ್ಗಡೆ ಹೊಂದುತ್ತಿದ್ದರು........! ಒಂದು ದಿನ ಏಕನಾಥನು ಹೆಂಡತಿಯ ಹತ್ತಿರ, 'ನೋಡು, ನಾವು ಹೆಣ್ಣೆಂದು ಎಷ್ಟು ತಿರಸ್ಕರಿಸುತ್ತೇವೆ. ಗೀತೆಯ ಭಾಗ್ಯವನ್ನು ನೋಡಿದೆಯಾ? ಇನ್ನು ಇವಳು ಎಂತಹ ಶ್ರೀಮಂತನ ಮನೆಯನ್ನು ಪ್ರವೇಶಿಸುವ ಭಾಗ್ಯಲಕ್ಷ್ಮಿಯಾಗುವಳೋ ಯಾರುಬಲ್ಲರು? ಈ ಜಗತ್ತಿನಲ್ಲಿ ರಾಜಗೋಪಾಲನಂತಹ ಮನುಷ್ಯರು ಒಬ್ಬರಿಬ್ಬರಿರಬಹುದು........ಗೀತೆಯಂತಹ ಮುದ್ದುಮಕ್ಕಳು ನಮಗೂ ಹುಟ್ಟಲೆಂದೂ ಅಂಬಾಭವಾನಿಯನ್ನು ಪ್ರಾರ್ಥಿಸೋಣ' ಎಂದನು. ರಾತ್ರಿ ಬಹಳವಾಗಿತ್ತು. ಮುಂಚಿನ ದಿನ ಇಬ್ಬರೂ 'ಸಿನೇಮಾ' ಪ್ರದರ್ಶನಕ್ಕೆ ಹೋಗಿದ್ದರು. ಆದುದರಿಂದ ಕೂಡಲೇ ದೀಪವನ್ನು ಆರಿಸಿ, ಮಲಗಿದರು. ನಿದ್ರಾಸಾಮ್ರಾಜ್ಯದಲ್ಲಿ ರಾಜ-ರಾಣಿಯರಾದರು! ಒಬ್ಬರಿಗೊಬ್ಬರು ತೆಕ್ಕೆಬಿದ್ದರು! ಅವರಿಬ್ಬರೆಂದೆಂದೂ ಭಾವಿಸಿರಲಿಲ್ಲ........ ...ಆದುದರಿಂದ ಅಂದು ಒಂದಾದರು. ಒಂದಾಗಿ ಆ 'ಪ್ರೇಮಪೂರ್ಣಮಂದಿರ'........ದಲ್ಲಿ ಹಾಯಾಗಿ ಮಲಗಿದರು.

ಒಂದು ವರ್ಷ ನೇರವಾಗಿ ಕಳೆಯಿತು. ಏಕನಾಥನಿಗೂ ಒಂದು ಗಂಡುಮಗು! ಮೂರು ತಿಂಗಳ ಮಗು ಮೂರು ವರ್ಷದ ಮಗುವಿನಂತೆ ಗುಂಡು ಗುಂಡಾಗಿದ್ದಿತ್ತು. ಹೆಸರು 'ಕಿಶೋರಚಂದ್ರ'. ಪ್ರೇಮಲತೆ

ಕಿಶೋರಚಂದ್ರನನ್ನು ತಂದು ಗಂಡನ ತೊಡೆಯ ಮೇಲೆ ಕುಳ್ಳಿರಿಸಿ, 'ಆ ದಿನ ಬಂಜೆಗೆ ಹೇಗೆ ಮಕ್ಕಳನ್ನು ಹಡೆದ ತಾಯಿಯ ಕಷ್ಟ ತಿಳಿದೀತು' ಎಂದು ನನ್ನನ್ನು ಹಂಗಿಸಿದ್ದೀರಲ್ಲಾ!............ಈಗ ನನಗೆ ತಾಯಿಯ ಕರುಳು........ಹೆತ್ತ ಕರುಳು ಇದೆಯೇ? ಎಂದು ಪ್ರೇಮಲತೆ ಗಂಡನನ್ನು ಪ್ರಶ್ನಿಸಿದಳು. 'ಹೌದು! ನಿನಗೆ ಹೆತ್ತಕರುಳು........ಕರುಳು ಬಳ್ಳಿ.... ........ಎಲ್ಲಾ ಇವೆ. ಈಗ ಇಲ್ಲವೆಂದು ಹೇಳಿದವರಾರು?' ಎಂದು ಏಕನಾಥನು ಒಯ್ಯಾರದಿಂದ ಗೋಣಲ್ಲಾಡಿಸಿದನು.

ಪ್ರೊಫೆಸರ್ ಏಕನಾಥ್, ಎಂ.ಎ., ಹೆಂಡತಿ ಪ್ರೇಮಲತಾ, ಒಟ್ಟಿಗೆ ತೊಟ್ಟಿಲಲ್ಲಾಡುವ ಕಿಶೋರಚಂದ್ರ, ಇಡೀ ಮನೆಯನ್ನೇ ಬೆಳಗುವ ಮಿಂಚಿನ ಬಳ್ಳಿ—ಗೀತಾ............ಹೀಗೆ ಸಂಸಾರವು ಸುಖಮಯವಾಗಿ ಸಾಗಿತು........ಆ ಪ್ರೇಮಪೂರ್ಣಮಂದಿರದಲ್ಲಿ........!



# ವಿಜಯಲಕ್ಷ್ಮಿ
(ಸಾಮಾಜಿಕ ನಾಟಕ)

## ಶ್ರೀಮಾನ್ ಎಂ. ಗೋಪಾಲಕೃಷ್ಣ ಅಡಿಗರ ಅಭಿಪ್ರಾಯ

ಶ್ರೀಮಾನ್ ಯು. ನಾರಾಯಣಭಟ್ಟರು ಮತ್ತು ಶ್ರೀಮಾನ್ ವೆಂಕಟರಾವ್, ಎನ್. ಅಧಣೀಕರ್, ಗಾನಕೋವಿದ—ಇವರು ಕೂಡಿ ರಚಿಸಿದ 'ವಿಜಯಲಕ್ಷ್ಮಿ' ~~ಅಥವಾ 'ರೈತನ ಗೋಳು'~~ ಎಂಬ ಸಾಮಾಜಿಕ ನಾಟಕವನ್ನು ಆಮೂಲಾಗ್ರ ಓದಿನೋಡಿದೆ. ಹಳ್ಳಿಯಲ್ಲಿ ನಿಸ್ಸಹಾಯರಾಗಿ ಬಂಡವಾಳಗಾರರ ಶೋಷಣಯಂತ್ರಕ್ಕೆ ಸಿಕ್ಕಿ ನುಚ್ಚುನೂರಾಗುತ್ತಿರುವ ರೈತನ ದೀನ ಹೀನ ದುರಂತ ಚಿತ್ರವಿದು. ತುಂಬ ಸೊಗಸಾಗಿ ಬಂದಿದೆ. ಮಾತು ಸಹಜವಾಗಿದೆ, ಸರಳವಾಗಿದೆ. ಪಾತ್ರ ನಿರ್ಮಾಣ ಸನ್ನಿವೇಶ ಸಂವಿಧಾನಗಳಲ್ಲಿ ಅಷ್ಟೇನೂ ವೈಶಿಷ್ಟ್ಯ ಕಂಡುಬರದೆ ಇದ್ದರೂ ಒಟ್ಟಿನಲ್ಲಿ ಈ ನಾಟಕ ಪ್ರೇಕ್ಷಕರ ಮೇಲೆ ಪರಿಣಾಮಕಾರಿಯಾಗದೆ ಇರಲಾರದಾಗಿ ನನ್ನ ನಂಬುಗೆ. ಅಷ್ಟೇನೂ ವಿಶೇಷ ಸಂಸ್ಕಾರವಿಲ್ಲದೆ ಇರುವ ಅಕ್ಷರಸ್ಥರಾದ ವಯಸ್ಕರ ಮುಂದೆ ಆಡಿತೋರಿಸಲು ಎಲ್ಲ ವಿಧದಿಂದಲೂ ತಕ್ಕುದಾಗಿದೆ ಎಂದು ನನ್ನ ಅಭಿಪ್ರಾಯ—ಏಕೆಂದರೆ ಇಲ್ಲಿ ಏನು ಹೇಳಬೇಕಾಗಿದೆಯೋ ಅದನ್ನು ಸುಲಭವಾಗಿ ಆದರೂ ತುಂಬಾ ಅಚ್ಚುಕಟ್ಟಾಗಿ ಹೇಳುವ ಕೌಶಲವಿದೆ. ಇಲ್ಲಿನ ಹಾಡುಗಳು ತುಂಬಾ ಸರಸವಾಗಿ ಒಳ್ಳೆ ರಾಗಗಳಿಂದ ಕೂಡಿರುವುದರಿಂದ ಅವು ಎಂಥ ಪ್ರೇಕ್ಷಕವರ್ಗಕ್ಕೂ ಆಹ್ಲಾದಕಾರಿಗಳಾಗುವುವಾಗಿ ನನ್ನ ಭರವಸೆ. ಈಗ ಅನೇಕ ನಾಟಕ ಕಂಪನಿಗಳು ಅಭಿನಯಿಸುತ್ತಿರುವ ಹಲವು ನಾಟಕಗಳಿಗಿಂತ ಇದು ಎಷ್ಟೋಪಾಲು ಕಲಾತ್ಮಕವಾಗಿದೆ ಎಂಬುದು ನಿಸ್ಸಂದೇಹ.

# ಇದೇ ಲೇಖಕರ ಬೇರೆ ಗ್ರಂಥಗಳು

---

## ಅಚ್ಚಿಗೆ ಸಿದ್ಧವಾದುವು

| | | | |
|---|---|---|---|
| ಹಣ್ಣಿನ ಬುಟ್ಟಿ | .... | .... | (ಕವನ ಸಂಗ್ರಹ) |
| ಭಾವ ಚಿತ್ರ | .... | .... | (ಸಾಮಾಜಿಕ ಕಥೆ) |
| ರಸ ನಿಮಿಷಗಳು | .... | .... | (ಹರಟೆಗಳು) |
| ಸುಖಾಗಮನ | .... | .... | (ಕವನ ಸಂಗ್ರಹ) |
| ಚಿಗುರಿನ ಚಿತ್ರ | .... | .... | (ಕಥಾ ಸಂಗ್ರಹ) |
| ಅಡಿಗರ ಕೃತಿಗಳು | .... | .... | (ಪರಿಚಯಾತ್ಮಕ) |
| ಚಿತ್ರಕೂಟ | .... | .... | (ಕವನ ಸಂಗ್ರಹ) |
| ನಗೆ-ಹೊಗೆ | .... | .... | (ಸಾಮಾಜಿಕ ಕಾದಂಬರಿ) |
| ತೆಂಗಿನ ತವರು | .... | .... | (ಜೀವನ ಚಿತ್ರಗಳು) |